ನೆಹರೂ ಬಾಲ ಪುಸ್ತಕಾಲಯ

# ಸಾರ್ವಕಾಲಿಕ ಪುಸ್ತಕಗಳು


ಮನೋಜ್ ದಾಸ್

ಚಿತ್ರಗಳು :

ಸುಕುಮಾರ್ ಚಟರ್ಜಿ

ಅನುವಾದ :

ಎಂ. ಗೋಪಾಲಕೃಷ್ಣ ಅಡಿಗ








ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ

# ಸಾರ್ವಕಾಲಿಕ ಪುಸ್ತಕಗಳು

ಸುಮಾರು ಎರಡು ಸಾವಿರ ವರ್ಷಗಳ ಹಿಂದೆ ಚೀನಾದೇಶದಲ್ಲಿ ಒಬ್ಬ ಚಕ್ರವರ್ತಿ ಇದ್ದ. ಅವನ ಹೆಸರು ಹ್ಸಿ ಹ್ವಾಂಗ್ ಟಿ. ಈ ಚಕ್ರವರ್ತಿಗೆ ತನ್ನ ಪ್ರಜೆಗಳ ಮೇಲೆ ತುಂಬ ಕೋಪ. ಆ ಕೋಪಕ್ಕೆ ಕಾರಣ ವಿಚಿತ್ರವಾಗಿತ್ತು. ಅವನ ಪ್ರಜೆಗಳು ತುಂಬ ಓದುವವರು. ಓದು ಬಾರದವರು ಓದಿಸಿ ಕೇಳುತ್ತಿದ್ದರು. ಇತಿಹಾಸ, ತತ್ವಜ್ಞಾನ, ಕಥೆ—ಹೀಗೆ ನಾನಾ ವಿಧದ ಗ್ರಂಥಗಳು ಇದ್ದವು. ಅವೆಲ್ಲವೂ ತನ್ನ ಅಥವಾ ತನ್ನ ಪೂರ್ವಿಕರ ಮಹಿಮೆಯನ್ನು ಕುರಿತೇ ಹೊಗಳಿ ಹಾಡುತ್ತವೆ ಎಂದು ಅವನಿಗೆ ಖಾತ್ರಿ ಇರಲಿಲ್ಲ. ಅವನನ್ನೇ ಟೀಕಿಸುವಂಥ ಗ್ರಂಥಕರ್ತರೂ ಇದ್ದರೂ ಇದ್ದಿರಬಹುದು. ಯಾರು ಬಲ್ಲರು?

ಸುಮ್ಮನೆ ಏನೇನೋ ಓದಿ ತಲೆ ಕೆಡಿಸಿಕೊಳ್ಳುವ ಅಗತ್ಯ ತನ್ನ ಪ್ರಜೆಗಳಿಗಿಲ್ಲ ಎಂದು ಆ ಚಕ್ರವರ್ತಿಯ ಭಾವನೆ. ಪ್ರಜೆಗಳು ಕಷ್ಟ ಪಟ್ಟು ಕೆಲಸ ಮಾಡಬೇಕು. ರಾಜನಲ್ಲಿ ಭಕ್ತಿಯುಳ್ಳವ ರಾಗಿರಬೇಕು, ತೆರಿಗೆಗಳನ್ನು ತಪ್ಪದೆ ತೆರಬೇಕು. ಆಗಲೇ ದೇಶದಲ್ಲಿ ಶಾಂತಿ ನೆಲೆಸುವುದು ಸಾಧ್ಯ.

ಹೀಗೆ ಯೋಚಿಸಿ ದೇಶದಲ್ಲಿರುವ ಎಲ್ಲ ಪುಸ್ತಕಗಳನ್ನೂ ನಾಶಗೊಳಿಸಬೇಕೆಂದು ಚಕ್ರವರ್ತಿ ಆಜ್ಞೆ ಕೊಟ್ಟ. ಆ ಕಾಲದಲ್ಲಿ ಪುಸ್ತಕಗಳೆಂದರೆ ಶಬ್ದಗಳನ್ನು ಕೆತ್ತಿದ್ದ ಮರದ ತುಂಡುಗಳು. ಅವುಗಳನ್ನು ಅಡಗಿಸಿಡುವುದೂ ಸುಲಭವಾಗಿರಲಿಲ್ಲ. ಚಕ್ರವರ್ತಿಯ ಆಳುಗಳು ಹಳ್ಳಿಯಿಂದ ಹಳ್ಳಿಗೆ ಪಟ್ಟಣದಿಂದ ಪಟ್ಟಣಕ್ಕೆ ಸಂಚರಿಸುತ್ತ ಕೈಗೆ ಸಿಕ್ಕಿದ ಪುಸ್ತಕಗಳನ್ನೆಲ್ಲ ಬೆಂಕಿಗೆ ಹಾಕಿ ಸುಟ್ಟರು. ಚೀನಾದೇಶದ ದೊಡ್ಡ ಗೋಡೆಯನ್ನು ಕಟ್ಟುತ್ತಿದ್ದ ಕಾಲ ಅದು. ಅನೇಕ ಪುಸ್ತಕ ಗಳನ್ನು—ಮರದ ದುಂಡನೆಯ ತುಂಡುಗಳು ಅವು— ಕಲ್ಲಿಗೆ ಬದಲಾಗಿ ಗೋಡೆ ಕಟ್ಟಲು

ಬಳಸಿದರು. ತಮ್ಮ ಪುಸ್ತಕಗಳನ್ನು ಬಿಟ್ಟು ಕೊಡಲು ಒಪ್ಪದ ವಿದ್ವಾಂಸರನ್ನೂ ಕೆಲವು ಸಲ ಅವರವರ ಪುಸ್ತಕಗಳ ಜೊತೆಗೇ ಆ ರಾಕ್ಷಸ ಗೋಡೆಯಲ್ಲಿ ಹೂತರು.

ಹೀಗೆ ಅನೇಕ ವರ್ಷಗಳು ಕಳೆದುವು. ಚಕ್ರವರ್ತಿ ಮೃತನಾದ. ಅವನು ಸತ್ತ ಕೆಲವು ವರ್ಷಗಳಲ್ಲೇ ನಾಶವಾದುವೆಂದು ತಿಳಿದಿದ್ದ ಪುಸ್ತಕಗಳೆಲ್ಲ ಚೆನ್ನಾಗಿ ಉಜ್ಜಿ ನಯ ಮಾಡಿದ ಮರದ ತುಂಡುಗಳ ಮೇಲೆ ಮತ್ತೆ ಕಾಣಿಸಿಕೊಂಡುವು. ಆ ಪುಸ್ತಕಗಳ ಜೊತೆಗೇ ಮಹಾ ತತ್ವ ಜ್ಞಾನಿ ಕನ್‌ಫ್ಯೂಷಿಯಸ್ಸಿನ ಕೃತಿಗಳೂ ಇದ್ದುವು. ಆ ಕೃತಿಗಳನ್ನು ಈವತ್ತಿನ ವರೆಗೂ ಜಗತ್ತಿನ ಎಲ್ಲ ದೇಶದ ಜನರೂ ಓದುತ್ತ ಬಂದಿದ್ದಾರೆ.

ಪುಸ್ತಕಗಳನ್ನು ನಾಶ ಮಾಡಲು ನಡೆದ ಪ್ರಯತ್ನ ಇದೊಂದೇ ಅಲ್ಲ.

ಏಳನೆಯ ಶತಮಾನದಲ್ಲಿ ನಲಂದಾ ವಿಶ್ವವಿದ್ಯಾಲಯ ವೈಭವದ ಶಿಖರದ ಮೇಲೆ ಇದ್ದಾಗ ಅಲ್ಲಿ ಚೀನಾದೇಶದ ಪ್ರಖ್ಯಾತ ವಿದ್ವಾಂಸನೂ ಯಾತ್ರಿಕನೂ ಆಗಿದ್ದ ಹ್ಯೂಯನ್ ತ್ಸಾಂಗ್ ವಿದ್ಯಾರ್ಥಿಯಾಗಿದ್ದ. ಅವನಿಗೆ ಒಂದು ರಾತ್ರಿ ವಿಶ್ವವಿದ್ಯಾನಿಲಯದ ಸುಂದರ ಭವನಗಳೆಲ್ಲ ಅದೃಶ್ಯವಾಗಿ ಅಲ್ಲಿ ಅಧ್ಯಾಪಕರ ಮತ್ತು ವಿದ್ಯಾರ್ಥಿಗಳ ಬದಲಾಗಿ ಕೋಣಗಳೇ



ತುಂಬಿಕೊಂಡಿರುವಂತೆ ಕನಸು ಬಿತ್ತು. ಕೆಲವು ಸಮಯದ ಅನಂತರ ಪರ ದೇಶದ ಧಾಳಿಕಾರರು ಅಲ್ಲಿದ್ದ ವಿಶಾಲ ಪುಸ್ತಕ ಭಂಡಾರದ ಮೂರು ವಿಭಾಗಗಳನ್ನು ನಾಶ ಮಾಡಿದಾಗ ಅವನ ಆ ಕನಸು ನಿಜವಾದಂತಾಯಿತು.

ಒಂದಾನೊಂದು ಕಾಲದಲ್ಲಿ ಅಲೆಗ್ಸಾಂಡ್ರಿಯಾ ಎಂಬ ಪುರಾತನ ನಗರದಲ್ಲಿ ದೊಡ್ಡದೊಂದು ಗ್ರಂಥಾಲಯ ಇತ್ತು. ಅನೇಕ ದೇಶಗಳಿಂದ ಸಂಗ್ರಹಿಸಿದ್ದ ಕೈ ಬರೆಹದ ಪುಸ್ತಕಗಳು ಅಲ್ಲಿ ತುಂಬಿದ್ದುವು. ಭಾರತವೂ ಸೇರಿದಂತೆ ಅನೇಕ ದೇಶಗಳಿಂದ ನೂರಾರು ಮಂದಿ ಅಲ್ಲಿಗೆ ಹೋಗಿ ಕಲಿಯುತ್ತಿದ್ದರು. ಆದರೆ ಏಳನೆಯ ಶತಮಾನದಲ್ಲಿ ಈ ಅಮೂಲ್ಯ ಗ್ರಂಥ ಭಂಡಾರವನ್ನು ಬುದ್ಧಿಪೂರ್ವಕವಾಗಿ ಸುಟ್ಟು ಬೂದಿ ಮಾಡಿದರು.



ಆ ಗ್ರಂಥ ಭಂಡಾರವನ್ನು ನಾಶಮಾಡಿದ ಧಾಳಿಕಾರ ಈ ರೀತಿ ವಾದ ಮಾಡಿದ: ಅಲ್ಲಿದ್ದ ಅಸಂಖ್ಯ ಪುಸ್ತಕಗಳು ತನ್ನ ಪವಿತ್ರ ಧರ್ಮಗ್ರಂಥದಲ್ಲಿ ಇದ್ದದ್ದನ್ನು ಹೇಳುವುದಿಲ್ಲವಾದರೆ ಅವು ಈ ಜಗತ್ತಿನಲ್ಲಿ ಇರಬಾರದು; ಒಂದು ವೇಳೆ ಅವು ತನ್ನ ಧರ್ಮ ಗ್ರಂಥ ಆಗಲೇ ಹೇಳಿದನ್ನು ಮತ್ತೆ ಹೇಳುವಂಥವುಗಳಾದರೆ ಈ ಜಗತ್ತಿನಲ್ಲಿ ಅವು ಇರುವ ಅಗತ್ಯವಿಲ್ಲ.

ಹೀಗೆ ಅನೇಕ ಸಲ ಪುಸ್ತಕಗಳನ್ನು ನಾಶ ಮಾಡಲಾಗಿದೆ. ಆದರೆ ಕಳೆದು ಹೋದುವು ಅಥವಾ ನಾಶವಾದುವು ಎಂದು ಭಾವಿಸಲಾಗಿದ್ದ ಗ್ರಂಥಗಳು ತಮ್ಮ ಹಳೆಯ ರೂಪಗಳಲ್ಲಾಗಲೀ ಅಥವಾ ಹೊಸತೊಂದು ರೂಪದಲ್ಲಾಗಲೀ ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತ ಬಂದಿವೆ. ಕೊನೆಗೂ ಪುಸ್ತಕಗಳೆಂದರೆ ಮನುಷ್ಯನ ಜ್ಞಾನ, ಅನುಭವ, ತಿಳಿವಳಿಕೆ, ಕಲ್ಪನೆ, ದರ್ಶನಗಳ ಫಲಗಳೇ ಸರಿ. ಆದ ಕಾರಣ ಪುಸ್ತಕಗಳನ್ನು ನಾಶ ಮಾಡಿದರೂ ಮನುಷ್ಯನ ಈ ಗುಣಗಳು ನಾಶವಾಗುವುದಿಲ್ಲ. ಎರಡನೆಯ ಶತಮಾನದಲ್ಲಿ ಡೆನ್ಮಾರ್ಕ್ ದೇಶದಲ್ಲಿ ಧರ್ಮ ಗುರುವೊಬ್ಬನನ್ನು ಅವನೇ ಸಂಗ್ರಹಿಸಿದ್ದ ಪುಸ್ತಕಗಳ ಜೊತೆಗೆ ಜೀವಸಹಿತ ಸುಡಲಾಯಿತು. ಆತನ ಕೊನೆಯ ಮಾತು ನೆನಪಿನಲ್ಲಿಟ್ಟುಕೊಳ್ಳಲು ಯೋಗ್ಯವಾಗಿದೆ; 'ಕಾಗದಗಳೇನೋ ಸುಟ್ಟು ಬೂದಿಯಾಗುತ್ತವೆ, ಆದರೆ ಶಬ್ದಗಳು ಹಾರಿ ಹೋಗುತ್ತವೆ.'

ಪುಸ್ತಕಗಳನ್ನು ತಮ್ಮ ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುವ ಜನ ಇದ್ದಾರೆ. ತಮ್ಮ ಪ್ರೀತಿಯ ಪುಸ್ತಕಗಳಿಗಾಗಿ ಎಂಥಾ ಗಂಡಾಂತರಗಳನ್ನು ಬೇಕಾದರೂ ಅವರು ಎದುರಿಸುತ್ತಾರೆ. ಉದಾಹರಣೆಗೆ ಹಿಂದೂ ಸಂಪ್ರದಾಯದಲ್ಲಿ ಒಂದು ಕಥೆ ಇದೆ. ದೇವರಿಗೂ ಕೂಡ ಪುಸ್ತಕಗಳಲ್ಲಿ ಎಷ್ಟು ಪ್ರೀತಿ ಎಂದರೆ ಒಂದು ಸಲ ಪ್ರಳಯವಾಗಿ ನೀರಿನಿಂದ ಎಲ್ಲವೂ ನಾಶವಾಗುತ್ತಿದ್ದಾಗ ದೇವರು ಮೀನಿನ ರೂಪವನ್ನು ತಾಳಿ ವೇದಗಳನ್ನು ರಕ್ಷಿಸಿದ. ತಮ್ಮ ಮೆಚ್ಚಿನ ಪುಸ್ತಕ ನಾಶವಾದರೂ ಚಿಂತೆ ಪಡದ ಕೆಲವರು ಇದ್ದಾರೆ. ಕಾರಣವೇನೆಂದರೆ ಇಡೀ ಗ್ರಂಥವನ್ನು ಮೊದಲಿಂದ ಕೊನೆಯ ವರೆಗೂ ಬಾಯಿಪಾಠ ಮಾಡಿಕೊಂಡವರು ಅವರು.

ಪುರಾತನ ಕಾಲದಲ್ಲಿ ಗ್ರಂಥಗಳನ್ನು ಉರು ಹೊಡೆದು ಗಟ್ಟಿ ಮಾಡುವುದರಲ್ಲಿ ಜನರಿಗೆ ವಿಶೇಷ ಶಕ್ತಿ ಇತ್ತು. ಕ್ರಿಸ್ತನ ಜನ್ಮಕ್ಕೆ 900 ವರ್ಷಗಳ ಹಿಂದೆ ಗ್ರೀಸ್ ದೇಶದ ಮಹಾ ಕವಿ ಹೋಮರನ **ಇಲಿಯಡ್** ಮತ್ತು **ಒಡಿಸೀ** ಎಂಬ ಮಹಾ ಕಾವ್ಯಗಳನ್ನು ಗ್ರಂಥ ವಾಚನವೇ ಉದ್ಯೋಗವಾಗಿದ್ದ ಪಾಠಕರು ತಲೆಮಾರಿಂದ ತಲೆಮಾರಿಗೆ ನೆನಪಿಟ್ಟುಕೊಂಡು ಬಂದಿದ್ದರು. ಈ ಎರಡು ಮಹಾ ಕಾವ್ಯಗಳಲ್ಲಿ ಒಟ್ಟಿಗೆ 28000 ಸಾಲುಗಳು ಇದ್ದುವು. ಇದರ ನಾಲ್ಕು ಪಟ್ಟು ದೊಡ್ಡದಾದ ಕೃತಿಗಳನ್ನೂ ಬಾಯಿಪಾಠ ಮಾಡಿಟ್ಟುಕೊಳ್ಳಬಲ್ಲ ಪಾಠಕರೂ ಪುರಾಣಿಕರೂ ಇದ್ದಾರೆ.

ನೆನಪಿನ ಶಕ್ತಿಯ ಬಗ್ಗೆ ಯೋಚಿಸುವಾಗ ಥಟ್ಟನೆ ವೇದಗಳ ನೆನಪು ಬರುತ್ತದೆ. ಇವು ಭಾರತದ ಅತ್ಯಂತ ಪುರಾತನ ಗ್ರಂಥಗಳು. ಕೆಲವರ ಅಭಿಪ್ರಾಯದಂತೆ ಈ ಜಗತ್ತಿನಲ್ಲೇ ಇವು ಅತ್ಯಂತ ಪುರಾತನವಾದುವು. ವೇದಗಳ ಪದ್ಯಗಳನ್ನು ಬಹಳ ಕಾಲದ ವರೆಗೆ ಬರೆದಿಟ್ಟಿರಲಿಲ್ಲ. ಅವುಗಳನ್ನು ತಂದೆಯಿಂದ ಮಗ, ಗುರುವಿನಿಂದ ಶಿಷ್ಯ—ಹೀಗೆ ಬಾಯಿಪಾಠ ಮಾಡಿ ರಕ್ಷಿಸಿ ಕೊಂಡು ಬಂದಿದ್ದರು.



ಸಂಸ್ಕೃತ ಭಾಷೆಯು ತುಂಬ ಹಳೆಯ ರೂಪದಲ್ಲಿ ವೇದಗಳನ್ನು ರಚಿಸಲಾಗಿದೆ. ಭಾರತದಲ್ಲಿ ಎಲ್ಲ ಕಾಲಗಳಲ್ಲೂ ಅನೇಕ ಭಾಷೆಗಳು ಇದ್ದುವು. ಆದರೂ ಪುರಾತನ ಕಾಲದಲ್ಲಿ ಸಂಸ್ಕೃತವನ್ನು ಈ ದೇಶದ ಎಲ್ಲ ಕಡೆಗಳಲ್ಲೂ ಬಳಸುತ್ತಿದ್ದರು. ಸಂಸ್ಕೃತದ ಮೂಲಕವೇ ಭಾರತದ ಪ್ರತಿಯೊಂದು ಮೂಲೆಯಿಂದ ಕವಿಗಳೂ ವಿದ್ವಾಂಸರೂ ಭಾರತೀಯ ಸಾಹಿತ್ಯಕ್ಕೆ ತಮ್ಮ ತಮ್ಮ ಕಾಣಿಕೆಗಳನ್ನು ಸಲ್ಲಿಸಿದ್ದಾರೆ.

ಪುರಾತನ ಭಾರತದ ತತ್ವಜ್ಞಾನ ವಿಜ್ಞಾನಗಳು ದೂರ ದೂರದ ದೇಶಗಳಿಗೂ ಹಬ್ಬಿದ್ದುವು. ಅವುಗಳ ಜೊತೆಗೆ ಭಾರತದ ಕಥಾರತ್ನಕೋಶದ ಅನೇಕ ರತ್ನಗಳು ಹಿಮಾಲಯವನ್ನು ಏರಿ ಇಳಿದು. ಅನೇಕ ವಿಶಾಲ ಸಮುದ್ರಗಳನ್ನೂ ದಾಟಿ ಬಹಳ ದೂರ ದೂರದಲ್ಲಿದ್ದ ದೇಶಗಳಿಗೂ ಪ್ರಯಾಣ ಬೆಳೆಸಿದ್ದುವು. **ಕಥಾಸರಿತ್ಸಾಗರ, ಪಂಚತಂತ್ರ** ಮತ್ತು **ಜಾತಕ ಕಥೆ**ಗಳು ಇವುಗಳಲ್ಲಿ ಮುಖ್ಯವಾದುವು. **ಬೈಬಲ್ಲಿನಲ್ಲಿ**ರುವ ಅನೇಕಾನೇಕ ದೃಷ್ಟಾಂತ ಕಥೆಗಳು, ಗ್ರೀಸ್ ದೇಶದ ಈಸೋಪನ ನೀತಿಕಥೆಗಳು, ಜರ್ಮನಿಯ ಗ್ರಿಮ್ ಸಹೋದರರು ಸಂಗ್ರಹಿಸಿರುವ ಜಾನಪದ ಕಥೆಗಳು, ಡೆನ್ಮಾರ್ಕಿನ ಹ್ಯಾನ್ಸ್ ಆಂಡರ್‌ಸನ್ ಎತ್ತಿ ಹೇಳಿರುವ ಕಥೆಗಳು— ಈ ಎಲ್ಲದಕ್ಕೂ ಮೂಲ ಭಾರತವೇ ಎಂಬ ಸಂಗತಿ ಎಲ್ಲರಿಗೂ ತಿಳಿದಿದೆ.

ಭಾರತದ ಸಾಹಿತ್ಯ ಚರಿತ್ರೆ ನಿಜವಾಗಿಯೂ ದೊಡ್ಡದು. ವಿಶಾಲವೂ ಬಣ್ಣ ಬಣ್ಣಗಳಿಂದ ಕಂಗೊಳಿಸುವಂಥದೂ ಆದ ಆ ತೋಟಕ್ಕೆ ತೆರೆಯುವ ಒಂದು ಸಣ್ಣ ಕಿಟಕಿ ಈ ಪುಸ್ತಕ. ಕಾಲಕ್ರಮದಲ್ಲಿ ನೀವು ಈಗ ಇಲ್ಲಿ ಹೇಳುವ ಪುಸ್ತಕಗಳಲ್ಲದೆ **ಯೋಗವಾಸಿಷ್ಠ, ತ್ರಿಪಿಟಕ, ಧಮ್ಮಪದ, ಗ್ರಂಥಸಾಹೇಬ, ಜ್ಞಾನೇಶ್ವರಿ** ಮುಂತಾದ ಇನ್ನೂ ಅನೇಕ ಮಹಾ ಗ್ರಂಥಗಳನ್ನೋದಿ ಸಂತೋಷಪಡಬಹುದು.



# ವೇದಗಳು

ಅತ್ಯುನ್ನತವಾದ ಸಂಗತಿಗಳನ್ನು ತಿಳಿಯಲು ಮಾಡಿದ ಪ್ರಯತ್ನಗಳು, ಗಂಭೀರ ಪ್ರಶ್ನೆಗಳಿಗೆ ಕಂಡುಕೊಂಡ ಉತ್ತರಗಳು —ಇವೇ ಹೆಚ್ಚು ಕಡಿಮೆ ವಸ್ತುವಾಗಿರುವ ಗ್ರಂಥಗಳು ವೇದಗಳು; ದೇವರು, ಆನಂದ, ಸತ್ಯ ಎಂದರೇನು ಎಂದು ತಿಳಿಯಲು ನಡೆಸಿದ ಹೋರಾಟ.

ಬಹಳ ಕಾಲದ ವರೆಗೆ ವೇದಗಳನ್ನು ಶ್ರುತಿಗಳೆಂದೇ ಜನ ಕರೆಯುತ್ತಿದ್ದರು. ಈ ಶಬ್ದದ ಸಾಮಾನ್ಯವಾದ ಅರ್ಥ ಕೇಳಿದ ಸಂಗತಿ ಎಂದು. ಸಾಕ್ಷಾತ್ಕಾರವಾದ, ಕಣ್ಣಿಗೆ ಕಟ್ಟಿದಂತೆ ತಿಳಿದ ಸತ್ಯ ಎಂದು ಅದರ ಆಳವಾದ ಅರ್ಥ. ವೇದಗಳಲ್ಲಿರುವ ವಿಷಯಗಳು ಋಷಿಗಳಿಗೆ ಧ್ಯಾನ ಕಾಲದಲ್ಲಿ ಪರಬ್ರಹ್ಮನೇ ಕಾಣಿಸಿಕೊಟ್ಟಂಥವು ಎಂಬ ನಂಬಿಕೆ ಇದೆ. ವಸಿಷ್ಠ, ವಿಶ್ವಾಮಿತ್ರ, ಅತ್ರಿ, ಪರಾಶರ, ಕಣ್ವ, ಮಧುಚ್ಛಂದ ಮುಂತಾದ ಕೆಲವು ಮಂದಿ ವೈದಿಕ ಋಷಿಗಳ ವಿಷಯ ಪುರಾತನ ಪುರಾಣ ಕಥೆಗಳಲ್ಲೂ ರೂಢಿ ಕಥೆಗಳಲ್ಲೂ ಮತ್ತೆ ಮತ್ತೆ ಬರುವುದರಿಂದ ಅವರ ಹೆಸರು ನಮಗೆ ಚೆನ್ನಾಗಿ ತಿಳಿದಿದೆ. ಅಲ್ಲದೆ ಎಷ್ಟೋ ಹಿಂದೂ ಕುಟುಂಬಗಳು ತಮ್ಮ ವಂಶದ ಮೂಲವನ್ನು ಈ ಋಷಿಗಳಲ್ಲಿ ಕಂಡುಕೊಂಡು ಬಂದಿದ್ದಾರೆ. ಹೀಗಾಗಿ ವೇದವನ್ನು ರಚಿಸಿದ ಋಷಿಗಳಿಗೂ ನಮಗೂ ಇರುವ ಸಂಬಂಧ ತುಂಬ ಆಳದಲ್ಲಿ ಬೇರು ಬಿಟ್ಟಿದೆ.

ದೇಹ ಮತ್ತು ಮನಸ್ಸುಗಳಲ್ಲದೆ ಪ್ರತಿ ಮನುಷ್ಯನಲ್ಲೂ ಅಂತರಂಗದ ಆಳದಲ್ಲಿ ಒಳ ತನ್ನತನ ಅಥವಾ ಆತ್ಮವೊಂದಿದೆ ಎಂದು ವೇದದ ಋಷಿಗಳು ನಂಬಿದ್ದರು. ಆ ಆತ್ಮವನ್ನು ಕಂಡುಕೊಳ್ಳುವುದೆಂದರೆ ತನ್ನನ್ನು ತಾನು ನಿಜವಾಗಿ ಸರಿಯಾಗಿ ತಿಳಿದುಕೊಳ್ಳುವುದು ಎಂದು ಅರ್ಥ. ಈ ಅರ್ಥದಲ್ಲಿ ಒಬ್ಬ ಮನುಷ್ಯ ತನ್ನನ್ನು ತಾನು ಗುರುತಿಸಿ ತಿಳಿದುಕೊಂಡರೆ ಅವನು ಋಷಿ ಆಗುತ್ತಿದ್ದ. ಅನಂತರ ಆ ಋಷಿ ತಾನು ಇಷ್ಟಪಟ್ಟರೆ ಬೇರೆಯವರೂ ತಮ್ಮನ್ನು ತಾವು ತಿಳಿದುಕೊಳ್ಳಲು ಸಹಾಯ ಮಾಡಲು ಸಿದ್ಧನಾಗುತ್ತಿದ್ದ. ಋಷಿಯಾದವನು ವಿದ್ಯಾರ್ಥಿಗಳನ್ನು ಸುತ್ತಲೂ ನೆಲದ ಮೇಲೆ ಕೂರಿಸಿಕೊಂಡು ಅವರಿಗೆ ಕಂಠಪಾಠ ಮಾಡಿಸುತ್ತಿದ್ದ.

ಪ್ರತಿನಿತ್ಯವೂ ಅನೇಕ ಗಂಟೆಗಳ ಕಾಲ ವಿದ್ಯಾರ್ಥಿಗಳು ವೇದದ ಮಂತ್ರಗಳ ಸಾಲುಗಳನ್ನು ಒಂದಾದ ಮೇಲೆ ಒಂದರಂತೆ ಪುನರಾವೃತ್ತಿ ಮಾಡಿ ಉರು ಹಚ್ಚುತ್ತಿದ್ದರು.

ಯಾವುದೇ ಒಂದು ಮತವನ್ನಾಗಲೀ ನಂಬಿಕೆಯನ್ನಾಗಲೀ ವೇದಗಳು ಬೋಧಿಸುವುದಿಲ್ಲ. ವೇದಗಳೆಂದರೆ ಋಷಿಗಳ ಅಂತರಂಗದ ಅನುಭವಗಳ ದಾಖಲೆಗಳು. ಆದರೆ ನಾವು ಒಂದು ದೂರದ ದೇಶಕ್ಕೆ ಅಥವಾ ಒಂದು ಪರ್ವತಕ್ಕೆ ಮಾಡಿದ ಪ್ರಯಾಣದ ಅನುಭವವನ್ನು ಯಾವ ರೀತಿ ವ... ಬಹುದೋ ಹಾಗೆ ಅನುಭವಗಳನ್ನು ವೇದದಲ್ಲಿ ವರ್ಣಿಸುವುದಿಲ್ಲ. ಧ್ಯಾನಕಾಲದಲ್ಲಿ ಋಷಿಗಳು ಯಾವುದನ್ನು ಸಾಕ್ಷಾತ್ಕಾರ ಮಾಡಿಕೊಂಡರೋ ಅದು ಸಾಮಾನ್ಯ ರೀತಿಯಲ್ಲಿ ವರ್ಣಿಸಲು ಸಾಧ್ಯವಾಗದಷ್ಟು ಗಂಭೀರವಾದುದು. ಆದ ಕಾರಣ ಅವರು ಯಾವುದನ್ನು 'ಸಂಕೇತ ಭಾಷೆ' ಎಂದು ಕರೆಯುತ್ತಾರೋ ಅಂಥ ಭಾಷೆಯನ್ನು ಬಳಸಬೇಕಾಯಿತು. ಎಂದರೆ ತನಗೆ ತಾನೇ ಸುಲಭವಾಗಿ ತಿಳಿಯಲಾರದಷ್ಟು ಆಳವಾದ ಅರ್ಥ ವೇದದಲ್ಲಿ ಬಳಸಿದ ಶಬ್ದಗಳಿಗೆ



ಇದೆ. ಇದಕ್ಕೆ ಎರಡು ಉದಾಹರಣೆಗಳು: 'ಉಷಾ' ಎಂದರೆ ನಸುಕು. ಆದರೆ ವೇದಗಳಲ್ಲಿ ಈ ಶಬ್ದಕ್ಕೆ ಮನುಷ್ಯನ ಮೋಡಕವಿದ ಮನಸ್ಸಿಗೆ ದೈವಿಕವಾದ ಬೆಳಕನ್ನು ತರುವ ದೇವತೆ ಎಂಬ ಅರ್ಥ ಇದೆ. ಅಥವಾ ಬೆಂಕಿ ಎಂಬ ಅರ್ಥವುಳ್ಳ 'ಅಗ್ನಿ' ಎಂಬ ಶಬ್ದವನ್ನು ತೆಗೆದುಕೊಳ್ಳಿ. ವೇದದ ಅರ್ಥದಲ್ಲಿ ಇದು ಎಲ್ಲವನ್ನೂ ನುಂಗುವ, ಎಲ್ಲರನ್ನೂ ಪವಿತ್ರಗೊಳಿಸುವ ಬೆಂಕಿ ಎಂದು ಮಾತ್ರವಲ್ಲ; ನಮ್ಮನ್ನು ಸತ್ಯದ ಕಡೆಗೆ ನಡೆಸಿಕೊಂಡು ಹೋಗುವ ಚೈತನ್ಯ, ಸಂಕಲ್ಪ, ಶಕ್ತಿ ಎಂತಲೂ ಆಗುತ್ತದೆ.

ಮಹಾ ಋಷಿಯೂ ಕವಿಯೂ ಆದ ವ್ಯಾಸರು ವೇದಗಳನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿದರು: ಋಕ್, ಯಜುಸ್, ಸಾಮ, ಅಥರ್ವ. (ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ). ಬೇರೆ ಬೇರೆ ದೇವತೆಗಳನ್ನು ಹೊಗಳುವ ಸೂಕ್ತಗಳೂ,

ಯಜ್ಞಕ್ಕೆ ಸಂಬಂಧಪಟ್ಟ ಬೇರೆ ಬೇರೆ ಕರ್ಮಾಂಗಗಳನ್ನೂ ಸಂಸ್ಕಾರಗಳನ್ನೂ ವಿವರಿಸುವ ಗದ್ಯ ಭಾಗಗಳೂ, ಅಮೂರ್ತ ಚಿಂತನದ ಅತ್ಯುನ್ನತ ಮಟ್ಟವನ್ನು ಸೂಚಿಸುವ ಅನೇಕ ತಾತ್ವಿಕ ಸೂಕ್ತಗಳೂ ವೇದಗಳಲ್ಲಿವೆ.

ವೇದಗಳನ್ನು ಬರೆದದ್ದು ಯಾವಾಗ? ಈ ಪ್ರಶ್ನೆಗೆ ಅನೇಕಾನೇಕ ಉತ್ತರಗಳನ್ನು ಕೊಟ್ಟಿದ್ದಾರೆ. ಅವುಗಳಲ್ಲಿ ಯಾವ ಉತ್ತರವಾದರೂ ಸರಿಯೆ ಎಂದು ಹೇಳುವುದು ಕಷ್ಟ.



ಸುಮಾರು ಕ್ರಿಸ್ತ ಪೂರ್ವ 2500ರಲ್ಲಿ ಇವುಗಳನ್ನು ರಚಿಸಲಾಯಿತೆಂದು ಅನೇಕ ವಿದ್ವಾಂಸರ ನಂಬಿಕೆ. ಆದರೆ ಜರ್ಮನಿಯ ಬಾನ್ ಪಟ್ಟಣದ ಎಚ್. ಜಾಕೋಬಿ ಮತ್ತು ಲೋಕಮಾನ್ಯ ತಿಲಕರಂತೆ ವೇದಗಳ ರಚನೆಯ ಕಾಲ ಕ್ರಿ. ಪೂ. 6000 ಎಂದು ನಂಬುವ ವಿದ್ವಾಂಸರೂ ಇದ್ದಾರೆ. ತಿಲಕರ ಈ ತೀರ್ಮಾನಕ್ಕೆ ವೇದಗಳಲ್ಲಿ ವರ್ಣಿಸಿರುವ ಗ್ರಹಗಳ ಸ್ಥಾನಗಳ ಅಭ್ಯಾಸವೇ ಆಧಾರ. ಆದರೆ ಮಡಾಂ ಬ್ಲಾವಟ್ಸ್ಕಿ ಎಂಬ ಇನ್ನೊಬ್ಬ ವಿದುಷಿ ವೇದಗಳಲ್ಲಿರುವ ಗ್ರಹ ಗಳ ವಿಶಿಷ್ಟ ಸ್ಥಾನ 6000 ವರ್ಷಗಳಿಗೊಮ್ಮೆ ಮತ್ತೊಮ್ಮೆ ಬರುತ್ತದೆಂದು ಹೇಳುತ್ತಾರೆ. ಹಾಗಾದರೆ ವೇದಗಳು 60,000 ವರ್ಷಗಳಷ್ಟು ಹಿಂದೆಯೇ ರಚಿತವಾಗಿಲ್ಲವೆಂದು ಖಚಿತವಾಗಿ ಹೇಳುವುದು ಹೇಗೆ? ಆಕೆಯ ಅಭಿಪ್ರಾಯದಂತೆ ವೇದಗಳ ರಚನೆಯಾದದ್ದು ನಮಗೆ ಊಹಿ ಸಲು ಅಸಾಧ್ಯವಾದಷ್ಟು ಪುರಾತನ ಕಾಲದಲ್ಲಿ.

ಭಾರತೀಯ ಸಂಪ್ರದಾಯಕ್ಕನುಸಾರವಾಗಿ ಮನುಷ್ಯ ಈಗ ವಿಜ್ಞಾನ ನಂಬಲು ಬಯಸು ವುದಕ್ಕಿಂತಲೂ ಹೆಚ್ಚು ಪುರಾತನ ಪ್ರಾಣಿ. ಒಂದಾನೊಂದು ಕಾಲದಲ್ಲಿ ಮಹಾ ಪ್ರಳಯ ಸಂಭವಿಸಿತೆಂದೂ ಅದರಲ್ಲಿ ಎಲ್ಲ ಜೀವ ಜಾತಿಗಳೂ ಮುಳುಗಿ ನಾಶವಾದುವೆಂದೂ ಪುರಾಣ ಗಳು ಹೇಳುತ್ತವೆ. ಆದರೆ ಆ ವಿನಾಶ ಕಾಲದಲ್ಲಿ ವಿಷ್ಣು ನೀರನ್ನು ಹೊಕ್ಕು ವೇದಗಳನ್ನು ಎತ್ತಿ ಉಳಿಸಿದ.



ಹಾಗಾದರೆ ನಾವು ಊಹಿಸಲೂ ಆಗದಷ್ಟು ಅತಿ ಪುರಾತನ ಕಾಲದಲ್ಲಿ ಇದ್ದ ನಾಗರಿಕತೆಯೊಂದಕ್ಕೆ ಇವು ದಾಖಲೆ ಪತ್ರಗಳೆಂದು ಈ ಕಥೆ ಸೂಚಿಸುತ್ತದೆಯೆ?

ಬರೆದಿಡುವ ಮೊದಲು ದೀರ್ಘ ಕಾಲದ ವರೆಗೆ ವೇದಗಳು ಬಾಯಿಯ ಮೂಲಕವಾಗಿ ಬಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ದಾಟಿ ಬಂದುವು. ವೇದಗಳ ಭಾಷೆ ತುಂಬ ಪ್ರೌಢವಾದುದು. ಬಹಳ ಕಡಿಮೆ ಶಬ್ದಗಳಲ್ಲಿ ಬಹಳ ಹೆಚ್ಚು ಅರ್ಥವನ್ನು ವ್ಯಕ್ತಗೊಳಿಸಬಲ್ಲ ಸಾಮರ್ಥ್ಯ ಈ ಭಾಷೆಗಿದೆ. ಈ ರೀತಿಯ ಪ್ರೌಢತೆ ಬರಬೇಕಾದರೆ ಒಂದು ಭಾಷೆ ಬಹಳ ಕಾಲದಿಂದ ಉಪಯೋಗದಲ್ಲಿ ಇದ್ದಿರಬೇಕು. ಅಂಥ ಭಾಷೆಯನ್ನು ಶ್ರೇಷ್ಠವಾದೊಂದು ನಾಗರಿಕತೆ ಮಾತ್ರ ಬೆಳಸುವುದು ಸಾಧ್ಯ.

ಒಂದಲ್ಲ ಒಂದು ದಿವಸ ವೇದಗಳನ್ನು ಉತ್ಪಾದಿಸಿದ ನಾಗರಿಕತೆಯ ಬಗ್ಗೆ ಇನ್ನೂ ಹೆಚ್ಚು ತಿಳಿವಳಿಕೆ ಲಭಿಸಬಹುದೆಂದೂ ಅದರಲ್ಲಿರುವ ಸೂಕ್ತಗಳ ನಿಜವಾದ ಅರ್ಥ ನಮಗೆ ತಿಳಿಯಬಹುದೆಂದೂ ಆಶೆಯಿಟ್ಟುಕೊಳ್ಳೋಣ. ಒಬ್ಬ ಮನುಷ್ಯನಿಗೆ ಋಷಿಯ ಜ್ಞಾನ ಸಿದ್ಧಿಸಿದಾಗಲೇ ಅವನಿಗೆ ವೇದಗಳ ಅರ್ಥ ಆಗಬಲ್ಲುದು ಎಂದು ವೇದಗಳು ಹೇಳುತ್ತವೆ.



# ಉಪನಿಷತ್ತುಗಳು

ಬಹಳ ಬಹಳ ವರ್ಷಗಳ ಹಿಂದೆ, ಒಂದಾನೊಂದು ಕಾಲದಲ್ಲಿ ವಾಜಸ್ರಾವಸ ಎಂಬ ಪ್ರಖ್ಯಾತ ಋಷಿ ಒಂದು ಅಸಾಮಾನ್ಯವಾದ ಯಜ್ಞ ಕ್ರಿಯೆಯನ್ನು ನೆರವೇರಿಸಿದ. ಆ ಕ್ರಿಯೆಯ ವಿಧಿಗನುಸಾರವಾಗಿ ಯಜ್ಞಮಾಡುವವನು ಪುರೋಹಿತ ವರ್ಗಕ್ಕೂ ಬಡಜನರಿಗೂ ಇತರ ಅರ್ಹತೆಯುಳ್ಳವರಿಗೂ ತನ್ನ ಎಲ್ಲ ಐಶ್ವರ್ಯವನ್ನೂ ಆಸ್ತಿಗಳನ್ನೂ ದಾನ ಮಾಡಬೇಕು.

ಆ ಋಷಿಗೊಬ್ಬ ಚಿಕ್ಕ ವಯಸ್ಸಿನ ಮಗನಿದ್ದ. ಅವನ ಹೆಸರು ನಚಿಕೇತ. ತನ್ನ ತಂದೆ



ಎಲ್ಲವನ್ನೂ ದಾನವಾಗಿ ಕೊಡುತ್ತಾ ಇರುವು
ದರಿಂದ ತನ್ನನ್ನೂ ಕೂಡ ಯಾರಿಗಾದರೂ
ದಾನವಾಗಿ ಕೊಟ್ಟಿರಬೇಕೆಂದು ನಚಿಕೇತ
ಭಾವಿಸಿದ.

ಆದಕಾರಣ ಋಷಿ ತನ್ನ ಆಸ್ತಿಯನ್ನು
ಅತಿಥಿಗಳಿಗೆಲ್ಲ ಹಂಚುತ್ತಿರುವಾಗ ನಚಿಕೇತ
ಅವನ ಬಳಿಗೆ ಹೋಗಿ "ನನ್ನನ್ನು ಯಾರಿಗೆ
ದಾನ ಮಾಡಿದಿರಿ, ಅಪ್ಪಾ" ಎಂದು ಕೇಳಿದ.

ಋಷಿ ಉತ್ತರ ಕೊಡಲಿಲ್ಲ. ಆದರೆ
ಮಗ ತನ್ನ ಪ್ರಶ್ನೆಯನ್ನು ಮತ್ತೆ ಮತ್ತೆ



ಕೇಳುತ್ತಲೇ ಹೋದ. ಕೊನೆಗೆ ಕೋಪ ತಡೆಯಲಾರದೆ ಋಷಿ ಕೂಗಿ ಹೇಳಿದ: "ನಿನ್ನನ್ನು ಯಮನಿಗೆ ದಾನ ಮಾಡಿದ್ದೇನೆ."

ಯಮನೆಂದರೆ ಸಾವಿನ ಭಯಂಕರನಾದ ದೇವತೆ. ಋಷಿಯ ಆ ಮಾತನ್ನು ಕೇಳಿ ಅಲ್ಲಿದ್ದವರಿಗೆಲ್ಲ ದಿಗ್ಭ್ರಮೆ ಆಗಿರಬೇಕು. ಋಷಿಯೂ ಕೂಡಾ ತನ್ನ ಮಾತಿಗೆ ತಾನೇ ಬೆಚ್ಚಿಬಿದ್ದ. ನಚಿಕೇತನೊಬ್ಬನೇ ನಿಶ್ಚಲವಾಗಿ ನಿಂತಿದ್ದ. ಅವನು ಹೀಗೆ ಯೋಚಿಸುತ್ತಿದ್ದ: "ನನ್ನ ಸಾವನ್ನು ನಮ್ಮ ತಂದೆ ಬಯಸುವ ಹಾಗೆ ನಾನೇನೂ ತಪ್ಪು ಮಾಡಿಲ್ಲ. ನಾನು ಯಮನನ್ನು ಹೋಗಿ ನೋಡಬೇಕೆಂದು ವಿಧಿಯೇ ನಿರ್ಧರಿಸಿರಬೇಕು."

ಯಮನ ರಾಜ್ಯಕ್ಕೆ ಹೋಗಲು ನಚಿಕೇತ ಹೊರಟು ನಿಂತ. ಋಷಿಯೂ ಇತರರೂ ಅವನು ತನ್ನ ನಿಶ್ಚಯವನ್ನು ಬದಲಿಸುವಂತೆ ಪ್ರಯತ್ನಿಸಿದರು. ಆದರೆ ಆ ಹುಡುಗನ ನಿರ್ಧಾರ ದೃಢವಾಗಿತ್ತು. "ನಾನು ಹೋಗಿ ಯಮನನ್ನು ಸಂಧಿಸಲೇ ಬೇಕು" ಎಂದು ಹೇಳಿ ಅವನು ಮನೆ ಬಿಟ್ಟು ಹೊರಟ.



ನಚಿಕೇತ ಹೋಗಿ ತಲುಪಿದಾಗ ಯಮ ಅಲ್ಲಿ ಇರಲಿಲ್ಲ. ಯಮನಿಗಾಗಿ ಕಾಯುತ್ತ ಆ ಬಾಲಕ ಮೂರು ಹಗಲು ಮೂರು ರಾತ್ರಿ ಅನ್ನ ನೀರಿಲ್ಲದೆ ಕಳೆಯ ಬೇಕಾಯಿತು. ಹಿಂತಿರುಗಿ ಬಂದು ನೋಡಿದ ಯಮನಿಗೆ ಈ ಹುಡುಗನ ಧೈರ್ಯವನ್ನೂ ಸಂಕಲ್ಪ ಶಕ್ತಿಯನ್ನೂ ಕಂಡು ತುಂಬ ಸಂತೋಷವಾಯಿತು. ಯಮ "ನೀನು ಇಲ್ಲಿ ತಾಳ್ಮೆಯಿಂದ ಮೂರು ದಿನಗಳ ಕಾಲ

ಒದ್ದಾಡಿದ್ದೀಯೆ. ಅದಕ್ಕೆ ಪ್ರತಿಯಾಗಿ ನಾನು ನಿನಗೆ ಮೂರು ವರಗಳನು. ಕೊಡುತ್ತೇನೆ. ನಿನಗೆ ಏನು ಬೇಕು?" ಎಂದು ಕೇಳಿದ.

"ನಾನು ಮನೆ ಬಿಟ್ಟು ಬಂದಂದಿನಿಂದ ನಮ್ಮ ತಂದೆಗೆ ತುಂಬ ಚಿಂತೆಯೂ ದುಃಖವೂ ಆಗಿರಬೇಕು. ಮೃತ್ಯುದೇವತೆಯೇ, ನಮ್ಮ ತಂದೆಗೆ ಪುನಃ ಶಾಂತಿ ದೊರೆಯುವ ಹಾಗೆ ಮಾಡು" ಎಂದು ನಚಿಕೇತ ಕೇಳಿಕೊಂಡ.

"ಹಾಗೇ ಆಗಲಿ," ಎಂದ ಯಮ.

ಅನಂತರ ಮುದಿತನ ಮತ್ತು ಸಾವುಗಳ ಯಾವ ಭಯವೂ ಇಲ್ಲದ ಸ್ವರ್ಗಕ್ಕೆ ಹೋಗುವ ಗುಟ್ಟನ್ನು ತಿಳಿಯಬೇಕೆಂದು ನಚಿಕೇತ ಬಯಸಿದ. ಯಮನೂ ತುಂಬ ಸಂತೋಷದಿಂದ ಆ ಗುಟ್ಟನ್ನು ಬಿಚ್ಚಿ ಹೇಳಿದ.



ಕೊನೆಯದಾಗಿ ನಚಿಕೇತ ಕೇಳಿದ ವರ ಇದು: "ದೇವಾ, ತಿಳಿವಿಗೆ ಮೀರಿರುವ ಸಾವಿನ ಗೂಢ ರಹಸ್ಯವನ್ನು ನನಗೆ ಒಡೆದು ಹೇಳು. ಸತ್ತ ಬಳಿಕ ಏನಾಗುತ್ತದೆ? ಸಾವಿಲ್ಲದೆ ಅಮರ ವಾಗುವುದು ಹೇಗೆ?"

ಯಮ ಈಗ ಪೇಚಿಗೆ ಸಿಕ್ಕಿದ. ಈ ರಹಸ್ಯಗಳು ತುಂಬ ಭದ್ರವಾಗಿ ರಕ್ಷಿಸಿಕೊಂಡು ಬಂದಂಥವು. ಪರಾತ್ಪರನಾದ ದೇವರು ಮತ್ತು ಯಮ ಈ ಇಬ್ಬರನ್ನು ಬಿಟ್ಟರೆ ಇನ್ನು ಯಾರಿಗೂ ಈ ರಹಸ್ಯದ ಬಗ್ಗೆ ಏನೂ ತಿಳಿಯದು. ಆದ ಕಾರಣ ಈ ಒಂದನ್ನು ಬಿಟ್ಟು ಇನ್ನು ಐಶ್ವರ್ಯವನ್ನೋ, ಬಲವನ್ನೋ, ರಾಜ್ಯವನ್ನೋ ಏನು ಬೇಕಾದರೆ ಕೇಳು ಎಂದು ಯಮ ನಚಿಕೇತನನ್ನು ಪ್ರಾರ್ಥಿಸಿದ. ಆದರೆ ಆ ಬಾಲಕ ಈ ಯಾವ ಆಶೆಯ ಸೆಳೆತಕ್ಕೂ ಜಗ್ಗಲಿಲ್ಲ. ಸಾವಿನ ರಹಸ್ಯವನ್ನು ತೆರೆದು ನೋಡಬೇಕು, ಅಮರತ್ವದ ಗುಟ್ಟನ್ನು ತಿಳಿಯಬೇಕು—ಇದು ನಚಿಕೇತನ ನಿರ್ಧಾರ.

ಅತ್ಯಂತ ಗಂಭೀರವಾದ ಈ ಸಂಗತಿಗಳನ್ನು ತಿಳಿಯಲು ಆ ಹುಡುಗನಿಗಿದ್ದ ಉತ್ಸುಕತೆ ಯನ್ನು ಕಂಡು ಯಮನಿಗೆ ಅತ್ಯಾಶ್ಚರ್ಯವಾಯಿತು. ನಚಿಕೇತನ ಪ್ರಶ್ನೆಗಳಿಗೆ ಆತ ಉತ್ತರ ಕೊಡಲೇ ಬೇಕಾಗಿತ್ತು. ನಿಜವಾದ ತನ್ನತನವನ್ನು ಅಥವಾ ಆತ್ಮವನ್ನು ಅರಿಯಲು ಇರುವ ಕಷ್ಟಗಳೇನೆಂಬುದನ್ನು ಯಮ ನಚಿಕೇತನಿಗೆ ವಿವರಿಸಿ ಹೇಳಿದ. ನಿಜವಾದ ತನ್ನತನವನ್ನು ಅರಿತವನಿಗೆ ಸಾವು ಕೇವಲ ಭ್ರಮೆ ಎಂಬುದು ಅರ್ಥವಾಗುವುದು. ಏಕೆಂದರೆ ಮನುಷ್ಯನ ನಿಜವಾದ ತನ್ನತನವಾದ ಆತ್ಮ ಎಂದೂ ಸಾಯುವುದಿಲ್ಲ.

ನಚಿಕೇತನ ಈ ಕಥೆ ಉಪನಿಷತ್ತುಗಳಲ್ಲಿ ಇದೆ. ಎಲ್ಲರೂ ಬಹಳ ಕಾಲದಿಂದ ಬಹು ಪುರಾತನ ಕಾಲದ ಜ್ಞಾನವನ್ನು ಸಂಪಾದಿಸಲು ಸೊಂಟ ಕಟ್ಟಿ ನಿಂತಿರುವ ಅನೇಕ ತರುಣ ಸಾಧಕರನ್ನು ನಾವು ಉಪನಿಷತ್ತುಗಳ ಪುಟಗಳಲ್ಲಿ ಕಾಣಬಹುದು.

ಬಹಳ ಕಾಲದ ಹಿಂದೆ ನಮ್ಮ ದೇಶದಲ್ಲಿ ಪ್ರಚಾರದಲ್ಲಿದ್ದ ವಿದ್ಯಾಭ್ಯಾಸದ ಅದ್ವಿತೀಯ ಪದ್ಧತಿಯ ಸುಳಿವು ಸೂಚನೆಗಳು ನಮಗೆ ಉಪನಿಷತ್ತುಗಳ ಕಥೆಗಳಲ್ಲಿ ದೊರೆಯುತ್ತವೆ, ವಿದ್ಯಾರ್ಥಿಯಾದವನು ಯಾವೊಂದು ಹೊಣೆಗಾರಿಕೆಯೂ ಇಲ್ಲದೆ ತನ್ನ ಗುರುವಿನೊಡನೆ ಕಾಡಿನಲ್ಲಿ ವಾಸಿಸುತ್ತಿದ್ದ. ಅವನು ತನ್ನ ವಿದ್ಯಾಭ್ಯಾಸದಲ್ಲಿ ತಲ್ಲೀನನಾಗಿ ಇರುತ್ತಿದ್ದ. ಅವನ ವಿದ್ಯಾಭ್ಯಾಸ ಕೇವಲ ಧರ್ಮ ಗ್ರಂಥಗಳ ವ್ಯಾಸಂಗಕ್ಕಷ್ಟೇ ಪರಿಮಿತವಾಗಿದ್ದಿರಲಿಲ್ಲ. ಗಂಭೀರ ವಾದ ಧ್ಯಾನಯೋಗಗಳಿಂದ ಹಿಡಿದು ಪರಿಶ್ರಮ ಪೂರ್ಣವಾದ ದೈಹಿಕ ಕೆಲಸದ ವರೆಗೂ ಅದು ವಿಸ್ತರಿಸಿತ್ತು.

ಭಾರತದ ಸಾಹಿತ್ಯ ಪರಂಪರೆಯಲ್ಲಿ ಉಪನಿಷತ್ತುಗಳಿಗೆ ವೇದಗಳ ಅನಂತರದ ಮುಖ್ಯ ಸ್ಥಾನ. ಅನೇಕ ವಿದ್ವಾಂಸರು ಅವುಗಳನ್ನು ವೇದಗಳ ಭಾಗಗಳೆಂದೇ ಪರಿಗಣಿಸುತ್ತಾರೆ. ಅವುಗಳನ್ನು ವೇದಾಂತ, ವೇದಗಳ ಕೊನೆ ಎಂದು ಕರೆಯುತ್ತಾರೆ. ಆದರೆ ವೇದಗಳಲ್ಲಿರುವ ಕೆಲವು ವಿಚಾರಗಳ ವಿವರಣೆಗಳು ಇವು ಎಂದು ಭಾವಿಸುವುದು ಬಹುಶಃ ಹೆಚ್ಚು ಸರಿಯಾದುದು. ಪ್ರತಿ ಉಪನಿಷತ್ತಿನ ವಸ್ತುವೂ ಯಾವುದಾದರೊಂದು ವೇದಕ್ಕೆ ಸಂಬಂಧಪಟ್ಟಿರುತ್ತದೆ. ವೇದ ಕಾಲದ ಕೊನೆಯ ಭಾಗದಲ್ಲಿ ಉಪನಿಷತ್ತುಗಳಲ್ಲಿ ಹೆಚ್ಚಿನವು ರಚಿತವಾದುವು. ಕೆಲವು ಮಾತ್ರ ಬಹಳ ಕಾಲದ ಅನಂತರ ರಚಿತವಾಗಿರಬೇಕು. ಒಟ್ಟು 108 ಉಪನಿಷತ್ತುಗಳಿವೆ. ಅವುಗಳಲ್ಲಿ ಮುಖ್ಯವಾದುವು ಈಶ, ಕೇನ, ಕಠ, ಮುಂಡೂಕ, ಮಾಂಡೂಕ್ಯ ಮತ್ತು ಪ್ರಶ್ನೆ.

"ನಿನ್ನನ್ನು ನೀನು ತಿಳಿದುಕೋ" ಎಂಬುದೇ, ಸ್ಥೂಲವಾಗಿ ಹೇಳುವುದಾದರೆ, ಉಪನಿಷತ್ತು ವೇದಗಳ ಸಂದೇಶ. ಆದರೆ ಹಾಗೆ ತಿಳಿಯುವುದು ತುಂಬ ಕಷ್ಟದ ಕೆಲಸ. ಆದ ಕಾರಣ ಉಪನಿಷತ್ತುಗಳು ಹೀಗೆ ಹೇಳುತ್ತವೆ:

ಆತ್ಮವನ್ನು ಕುರಿತು ಕೇಳುವುದೂ ಎಷ್ಟೋ ಜನಕ್ಕೆ ಆಗದು. ಅದರ ಬಗ್ಗೆ ಎಷ್ಟೋ ಜನ ಕೇಳಿದರೂ ಅದು ಏನೆಂದು ತಿಳಿಯಲಾರರು. ಅದನ್ನು ಕುರಿತು ಮಾತಾಡುವವನು ಅದ್ಭುತ ವ್ಯಕ್ತಿಯೇ ಸರಿ. ಅದನ್ನು ಕುರಿತು ಕಲಿಯುವವನು ಬುದ್ಧಿ ಶಾಲಿ. ಸದ್ಗುರುವಿನ ಸಹಾಯ ದಿಂದ ಆತ್ಮವನ್ನು ಅರಿಯಬಲ್ಲವನು ನಿಜವಾದ ಪುಣ್ಯಾತ್ಮ.

ಉಪನಿಷತ್ತುಗಳನ್ನು ಬರೆದವರಿಗಿಂತ ಚೆನ್ನಾಗಿ ಈ ವಿಚಾರವನ್ನು ಇನ್ನಾರು ತಾನೇ ಕಲಿಸಬಲ್ಲರು? ಆತ್ಮದ ರಹಸ್ಯವನ್ನು ಸ್ಪಷ್ಟವಾಗಿಯೂ ಮನಸ್ಸಿಗೆ ನಾಟುವಂತೆಯೂ ವಿವರಿಸಲು ಅವರು ಯತ್ನಿಸುತ್ತಾರೆ. ಒಂದು ಉದಾಹರಣೆ ಇದು:

ಒಂದು ಸಲ ಮಹಾ ತತ್ವಜ್ಞಾನಿ ಯಾಜ್ಞವಲ್ಕ್ಯ ಜನಕರಾಜನೊಡನೆ ತಾತ್ವಿಕ ಚರ್ಚೆಯಲ್ಲಿ ತೊಡಗಿದ್ದರು. ಗೃಹಸ್ಥನಾಗಿದ್ದರೂ ಜನಕರಾಜ ತುಂಬ ಬಲ್ಲ ಜ್ಞಾನಿ. ಆತನನ್ನು ತುಂಬ ಮೆಚ್ಚಿದ ಯಾಜ್ಞವಲ್ಕ್ಯ ಒಂದು ವರ ಕೊಡುವುದಾಗಿ ಹೇಳಿದರು.

ರಾಜನೂ ತನ್ನ ಜೀವಮಾನದುದ್ದಕ್ಕೂ ಧರ್ಮಗ್ರಂಥಗಳನ್ನು ಅಭ್ಯಾಸ ಮಾಡುತ್ತ ಅವುಗಳ ಬಗ್ಗೆ ಯೋಚಿಸುತ್ತ ಬಂದಿದ್ದ. ಆದರೆ ಜ್ಞಾನಕ್ಕಾಗಿ ಅವನಲ್ಲಿದ್ದ ಬಾಯಾರಿಕೆ ಹಿಂಗಿಸಲಿಲ್ಲ. ಇನ್ನೂ ಹೆಚ್ಚು ತಿಳಿವಳಿಕೆಯನ್ನು ಪಡೆಯುವ ಆಸೆಯಿಂದ ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರೆಂದು ರಾಜ ಆ ಜ್ಞಾನಿಯನ್ನು ಪ್ರಾರ್ಥಿಸಿದ.

"ಯಾಜ್ಞವಲ್ಕ್ಯರೇ, ಮನುಷ್ಯನಿಗೆ ಬೆಳಕು ಯಾವುದು?" ಎಂದು ಜನಕರಾಜ ಕೇಳಿದ.



"ರಾಜನೇ, ಅದು ಸೂರ್ಯ" ಎಂದು ಯಾಜ್ಞವಲ್ಕ್ಯ ಉತ್ತರ ಕೊಟ್ಟನು. "ಏಕೆಂದರೆ ಸೂರ್ಯನ ಬೆಳಕಿನಿಂದ ಮನುಷ್ಯ ನೋಡುತ್ತಾನೆ, ಕೆಲಸ ಮಾಡುತ್ತಾನೆ, ಮನೆಗೆ ಮರಳಿ ಬರುತ್ತಾನೆ."

ಜನಕ ವೈದೇಹ ಹೇಳಿದ: "ಅದು ಹಾಗೆಯೇ ಸರಿ, ಯಾಜ್ಞವಲ್ಕ್ಯರೇ. ಆದರೆ ಸೂರ್ಯ ಮುಳುಗಿದ ಮೇಲೆ ಆಗ ಮನುಷ್ಯನಿಗೆ ಬೆಳಕು ಯಾವುದು?"

"ಆಗ ಚಂದ್ರ ಆತನಿಗೆ ಬೆಳಕು. ಏಕೆಂದರೆ ಚಂದ್ರನ ಬೆಳಕಿನಿಂದ ಮನುಷ್ಯ ನೋಡುತ್ತಾನೆ, ಕೆಲಸ ಮಾಡುತ್ತಾನೆ, ಅಲ್ಲದೆ ಮನೆಗೆ ಮರಳಿ ಬರುತ್ತಾನೆ," ಎಂದು ಯಾಜ್ಞವಲ್ಕ್ಯ ಉತ್ತರ ಕೊಟ್ಟರು.

"ಅದು ಹಾಗೆಯೇ ಸರಿ. ಆದರೆ ಸೂರ್ಯ ಮುಳುಗಿದಾಗ, ಚಂದ್ರನೂ ಮುಳುಗಿದಾಗ ಮನುಷ್ಯನಿಗೆ ಬೆಳಕು ಯಾವುದು?" ಎಂದು ಜನಕ ವೈದೇಹ ಮತ್ತೆ ಕೇಳಿದ.

ಆಗ ಯಾಜ್ಞವಲ್ಕ್ಯ, "ಬೆಂಕಿ ಅವನ ಬೆಳಕು. ಏಕೆಂದರೆ ಅದರ ಬೆಳಕಿನಿಂದ ಮನುಷ್ಯ ನೋಡುತ್ತಾನೆ, ಕೆಲಸ ಮಾಡುತ್ತಾನೆ, ಮನೆಗೆ ಹಿಂತಿರುಗಿ ಬರುತ್ತಾನೆ" ಎಂದು ಹೇಳಿದರು.

ವೈದೇಹ ಜನಕ ಮತ್ತೆ ಪ್ರಶ್ನೆ ಕೇಳಿದ: "ನೀವು ಹೇಳಿದ್ದು ಸರಿ ಯಾಜ್ಞವಲ್ಕ್ಯರೇ. ಆದರೆ ಸೂರ್ಯ ಮುಳುಗಿ, ಚಂದ್ರ ಮುಳುಗಿ, ಬೆಂಕಿ ಆರಿ ಹೋದ ಮೇಲೆ ಮನುಷ್ಯನಿಗೆ ಬೆಳಕು ಯಾವುದು?"

ಅದಕ್ಕೆ ಯಾಜ್ಞವಲ್ಕ್ಯ ಹೀಗೆ ಉತ್ತರ ಕೊಟ್ಟರು: "ಆಗ ಮಾತು ಅವನಿಗೆ ಬೆಳಕಾಗುತ್ತದೆ. ಅದರಿಂದ ಮನುಷ್ಯ ನೋಡುತ್ತಾನೆ, ಕೆಲಸ ಮಾಡುತ್ತಾನೆ, ಮನೆಗೆ ಹಿಂದಿರುಗಿ ಬರುತ್ತಾನೆ. ಆದ್ದರಿಂದ ರಾಜನೇ, ತನ್ನ ಕೈಯೇ ಸರಿಯಾಗಿ ತನಗೆ ಕಾಣಿಸದೆ ಇರುವಾಗಲೂ ಒಂದು ಸ್ವರ ಕೇಳಿದರೆ ಮನುಷ್ಯ ಅದರ ಕಡೆಗೆ ಹೋಗುತ್ತಾನೆ."



ಜನಕ ವೈದೇಹ ಆಗ, "ಅದು ಸರಿಯಾದದ್ದೇ, ಯಾಜ್ಞವಲ್ಕ್ಯರೇ. ಆದರೆ ಸೂರ್ಯ ಮುಳುಗಿ, ಚಂದ್ರ ಮುಳುಗಿ, ಬೆಂಕಿ ಆರಿ, ಮಾತು ನಿಂತಾಗ ಮನುಷ್ಯನಿಗೆ ಬೆಳಕಾಗುವುದು ಯಾವುದು?" ಎಂದು ಇನ್ನೊಂದು ಪ್ರಶ್ನೆ ಹಾಕಿದ.

ಆದಕ್ಕೆ ಯಾಜ್ಞವಲ್ಕ್ಯ "ಆಗ ಆತ್ಮವೇ ಅವನ ಬೆಳಕು" ಎಂದು ಉತ್ತರ ಕೊಟ್ಟರು.



# ರಾಮಾಯಣ

ದಂಡಕಾರಣ್ಯ ಈಗಲೂ ಇದೆ. ಅದರ ವಿಶಾಲವಾದ ಕಾಡನ್ನೂ ಪರ್ವತಗಳನ್ನೂ ನದಿಗಳನ್ನೂ ಅನೇಕಾನೇಕ ಪುರಾತನ ಗ್ರಂಥಗಳು ವರ್ಣಿಸುತ್ತವೆ. ಅದು ಹಿಂದಿನ ಕಾಲದಲ್ಲಿ ಇನ್ನೂ ದೊಡ್ಡದಾಗಿದ್ದು ಗೋದಾವರಿ ನರ್ಮದಾ ನದಿಗಳ ಮಧ್ಯದಲ್ಲಿದ್ದ ಜಾಗವನ್ನೆಲ್ಲ ಹಬ್ಬಿಕೊಂಡಿತ್ತು.

ಕಂದು ಬಿಳಿ ಕಲ್ಲು ಚೂರುಗಳ ಮೇಲೆ, ದಟ್ಟ ಕಾಡಿನ ಮೂಲಕವಾಗಿ ಇಂಪಾಗಿ ಮರ್ಮರ ಧ್ವನಿ ಮಾಡುತ್ತ, ನರ್ತಿಸುತ್ತ ತನ್ನ ದಾರಿ ಹಿಡಿದು ಸಾಗುತ್ತಿರುವ ತಮಸಾ ನದಿಯನ್ನು ಈ ದಿನ ಕೂಡಾ ಕಾಣಬಹುದು.

ಮೂರು ಸಾವಿರ ವರ್ಷಗಳ ಹಿಂದೆ ಈ ನದಿಯ ದಡದಲ್ಲಿ ಒಬ್ಬ ಮಹಾ ಋಷಿ ನೆಲಸಿದ್ದ. ಆತ ಅನೇಕ ವರ್ಷಗಳ ಕಾಲ ಗಂಭೀರವಾದ ತಪಸ್ಸಿನಲ್ಲಿ ಲೀನನಾಗಿ ಹೋಗಿದ್ದ. ಅವನು ಹೇಗೆ ಅಲ್ಲಾಡದೆ ಕುಳಿತಿದ್ದನೆಂದರೆ ಅವನ ಸುತ್ತಲೂ ಅವನ ದೇಹವನ್ನು ಮುಚ್ಚುವಂಥ ಹುತ್ತಗಳು ಬೆಳೆದಿದ್ದುವು. ಹುತ್ತಕ್ಕೆ ಸಂಸ್ಕೃತದಲ್ಲಿ 'ವಲ್ಮೀಕ' ಎನ್ನುತ್ತಾರೆ. ಈ ಋಷಿ ವಲ್ಮೀಕದಿಂದ ಹೊರಬಿದ್ದವನಾದುದರಿಂದ ಅವನನ್ನು ವಾಲ್ಮೀಕಿ ಎಂದು ಕರೆಯುತ್ತಿದ್ದರು.

ಒಂದು ದಿನ ಬೆಳಿಗ್ಗೆ ತಮಸಾ ನದಿಯಲ್ಲಿ ಸ್ನಾನವನ್ನು ಮುಗಿಸಿ ತನ್ನ ಆಶ್ರಮದ ಕಡೆಗೆ ಹಿಂತಿರುಗಿ ಬರುತ್ತಿದ್ದ. ಆಗ ಒಂದನ್ನೊಂದು ಅಟ್ಟಿಕೊಂಡು ಹೋಗಿ ಆಟವಾಡುತ್ತಿದ್ದ ಪಕ್ಷಿಗಳ ಒಂದು ಜೋಡಿ ಆತನ ಮನಸ್ಸನ್ನು ಸೆಳೆಯಿತು. ಅವುಗಳ ಆಟವನ್ನು ಗಮನವಿಟ್ಟು ನೋಡುವುದಕ್ಕಾಗಿ ಋಷಿ ಕೊಂಚ ನಿಂತುಕೊಂಡ. ಆಗ ಫಕ್ಕನೆ ಒಂದು ಬಾಣ ಗಾಳಿಯಲ್ಲಿ ಸುಯ್ಯುಗುಡುತ್ತ ಬಂದು ಆ ಜೋಡಿಯಲ್ಲಿ ಒಂದು ಪಕ್ಷಿಗೆ ನಾಟಿ ಅದನ್ನು ಕೊಂದು ಹಾಕಿತು. ಉಳಿದ ಆ ಒಂದು ಹಕ್ಕಿ ನೋವಿನಿಂದಲೂ ದುಃಖದಿಂದಲೂ ಕೂಗಿಕೊಂಡಿತು.



ವಾಲ್ಮೀಕಿ ಕೋಪದಿಂದ ತತ್ತರಿಸಿದ. ತುಂಬ ದುಃಖಿತನಾದ ವಾಲ್ಮೀಕಿ ತಳಮಳಗೊಂಡು ಭಾವೋದ್ರೇಕದಿಂದ ನುಡಿದ ಆತನ ಮಾತುಗಳು ಆ ಬೇಡನ ಕೃತ್ಯವನ್ನು ಖಂಡಿಸಿದ್ದೂ ಅಲ್ಲದೆ ಮನುಷ್ಯ ಹೇಗೆ ನಡೆದುಕೊಳ್ಳಬೇಕೆಂಬುದನ್ನೂ ಹೇಳಿದುವು !

ಕೋಪ ತಣಿದ ಮೇಲೆ ವಾಲ್ಮೀಕಿಗೆ ತಾನು ಯಾವ ಲಯದಲ್ಲಿ ಮಾತಾಡಿದ್ದನೋ ಆ ಲಯಕ್ಕೆ ಅಸಾಮಾನ್ಯವಾದೊಂದು ಶಕ್ತಿ ಇರುವುದು ತಿಳಿಯಿತು. ತಾನು ಬರೆಯಬೇಕೆಂದು ಬಯಸಿದ ಪುಸ್ತಕಕ್ಕೆ ಸರಿಯಾದ ಒಂದು ಹೊಸ ರೂಪವನ್ನು ಸೃಷ್ಟಿಸಲು ಆ ಋಷಿ ಅನೇಕ ದಿನಗಳಿಂದ ಪ್ರಯತ್ನ ನಡೆಸಿದ್ದ. ತಾನು ಈಗ ಆಡಿದ ಮಾತುಗಳು ತಳೆದಿದ್ದ ರೂಪವೇ ತನ್ನ ಉದ್ದೇಶಕ್ಕೆ ಸರಿಯಾದುದೆಂದು ಅವನಿಗೆ ಕಂಡಿತು.

ಹೀಗೆ ಆ ಬೇಡನನ್ನು ಕುರಿತು ಆಡಿದ್ದ ಮಾತುಗಳಿಂದ ಅಭಿವ್ಯಕ್ತಿಯ ಹೊಸ ರೂಪವೊಂದು—'ಕಾವ್ಯಭಾಷೆ'—ಹುಟ್ಟಿತು. ವಾಲ್ಮೀಕಿ ನಮ್ಮ ಮೊತ್ತಮೊದಲ ಕವಿ—'ಆದಿಕವಿ'. ಆತನು ಸಂಸ್ಕೃತದಲ್ಲಿ ರಚಿಸಿದ ಮಹಾಕೃತಿ 'ಮಹಾಕಾವ್ಯ' ನಮ್ಮ ಸಾಹಿತ್ಯದಲ್ಲಿ ಎಲ್ಲಕ್ಕೂ ಮೊದಲಿನ ನಿಜವಾದ ಕಾವ್ಯಕೃತಿ.

ಆ ಮಹಾಕಾವ್ಯವೇ ರಾಮಾಯಣ. ಒಂದಲ್ಲ ಒಂದು ರೂಪದಲ್ಲಿ ರಾಮಾಯಣದ ಕಥೆ ಪ್ರತಿಯೊಬ್ಬ ಭಾರತೀಯ ಬಾಲಕನಿಗೂ ತಿಳಿದಿದೆ. "ಒಂದಲ್ಲ ಒಂದು ರೂಪದಲ್ಲಿ" ಎಂಬ ಮಾತು ಬಳಸಿದ್ದೇಕೆಂದರೆ ಪ್ರತಿ ಯುಗದಲ್ಲೂ ರಾಮಾಯಣದ ಮುಖ್ಯ ಕಥೆ ಅಸಂಖ್ಯ ಲೇಖಕರಿಗೆ ಅದನ್ನು ಆಧರಿಸಿ ಮಹಾಕಾವ್ಯಗಳನ್ನೂ ನಾಟಕಗಳನ್ನೂ ಬರೆಯಲು ಸ್ಫೂರ್ತಿಯನ್ನು ಕೊಡುತ್ತಾ ಬಂದಿದೆ. ಇಂಥ ಅನೇಕರ ನಡುವೆ ಉತ್ತರ ಭಾರತದ ತುಲಸೀದಾಸ. ದಕ್ಷಿಣದ ಕಂಬನ್ ಇವರು ರಾಮಾಯಣವನ್ನು ತಮ್ಮದೇ ಆದ ವಿಶೇಷ ರೀತಿಯಲ್ಲಿ ರಚಿಸಿದರು. ಅವು ಭಾರತದ ಈ ಎರಡು ಭಾಗಗಳಲ್ಲಿ ತುಂಬ ಜನಪ್ರಿಯವಾಗಿವೆ.

ಈ ಎಲ್ಲ ಪಾಠಾಂತರಗಳಲ್ಲೂ ಮುಖ್ಯ ಕಥಾ ವಸ್ತು ಹೆಚ್ಚು ಕಡಿಮೆ ಒಂದೇ. ಅಯೋಧ್ಯೆಯ ರಾಜಕುಮಾರ ರಾಮನಿಗೆ ಪಟ್ಟಾಭಿಷೇಕ ನೆರವೇರಿಸಲು ಆತನ ವೃದ್ಧ ತಂದೆ ಎಲ್ಲ ಏರ್ಪಾಟುಗಳನ್ನೂ ಮಾಡಿದ್ದ. ಪಟ್ಟಾಭಿಷೇಕ ದಿನದ ಹಿಂದಿನ ರಾತ್ರಿ ದಶರಥನ ಮೂರು ಮಂದಿ ರಾಣಿಯರಲ್ಲಿ ಒಬ್ಬಳಾದ ಕೈಕೇಯಿ ರಾಜನು ತನಗೆ ಎರಡು ವರಗಳನ್ನು ಕೊಡುವೆನೆಂದು ಮಾತುಕೊಟ್ಟಿದ್ದನ್ನು ಅವನ ಜ್ಞಾಪಕಕ್ಕೆ ತರುತ್ತಾಳೆ. ಆಡಿದ ಮಾತಿನಂತೆ ತಾನು ಖಂಡಿತ ನಡೆಯುತ್ತೇನೆಂದು ದಶರಥ ಅವಳಿಗೆ ಆಶ್ವಾಸನೆ ಕೊಡುತ್ತಾನೆ.

ತನ್ನ ಮಗ ಭರತನೇ ದಶರಥನ ಉತ್ತರಾಧಿಕಾರಿಯಾದ ರಾಜನಾಗಬೇಕೆಂದೂ ರಾಮನನ್ನು ಹದಿನಾಲ್ಕು ವರ್ಷಗಳ ಕಾಲ ದೇಶಭ್ರಷ್ಟನನ್ನಾಗಿ ಮಾಡಬೇಕೆಂದೂ ಕೈಕೇಯಿ ತತ್ಕ್ಷಣವೇ ಕೇಳಿಕೊಳ್ಳುತ್ತಾಳೆ. ಈ ಮಾತು ಕೇಳಿ ರಾಜ ದಿಗ್ಭ್ರಾಂತನಾಗುತ್ತಾನೆ. ಬೇರೆ ಯಾವುದಾದರೂ ವರ ಕೇಳು ಎಂದು ದಶರಥ ಪ್ರಾರ್ಥಿಸಿದ್ದು ವ್ಯರ್ಥವಾಗುತ್ತದೆ.



ತನ್ನ ತಂದೆ ತಾನು ಕೊಟ್ಟ ಮಾತಿಗೆ ತಪ್ಪದೆ ತನ್ನ ಭಾಷೆಯಂತೆ ನಡೆಯಲಿ ಎಂಬ ಕಾರಣ ದಿಂದ ರಾಮ ತನ್ನ ಹೆಂಡತಿ ಸೀತೆ, ಕಿರಿಯ ತಮ್ಮ ಲಕ್ಷ್ಮಣರೊಡನೆ ಅಯೋಧ್ಯೆಯನ್ನು ತೊರೆದು ಕಾಡಿಗೆ ಹೋಗುತ್ತಾನೆ.

ಅನಂತರ ಸ್ವಲ್ಪ ಕಾಲದಲ್ಲೇ ಪುತ್ರ ಶೋಕದಿಂದ ದಶರಥ ಸಾಯುತ್ತಾನೆ.



ದುಃಖದಿಂದ ತನ್ನ ಮನಸ್ಸಿಗೆ ಒಪ್ಪಿಗೆ ಇಲ್ಲದಿದ್ದರೂ ಭರತ ರಾಮನ ಸ್ಥಾನದಲ್ಲಿ ರಾಜ್ಯಭಾರ ನಡೆಸುತ್ತಾನೆ.

ಸೀತೆ ಲಕ್ಷ್ಮಣರ ಜೊತೆಗೆ ರಾಮ ದಂಡಕಾರಣ್ಯದ ಮೂಲಕ ಪ್ರಯಾಣ ಮಾಡುತ್ತಾ ದಾರಿಯಲ್ಲಿ ದೈವಭಕ್ತರಾಗಿದ್ದ ಋಷಿಗಳಿಗೆ ಶತ್ರುಗಳಾಗಿದ್ದ ಅನೇಕಾನೇಕ ರಾಕ್ಷಸರನ್ನು ಕೊಲ್ಲುತ್ತಾನೆ. ಲಂಕಾ ದ್ವೀಪದಲ್ಲಿ ರಾಜ್ಯಭಾರ ಮಾಡುತ್ತಿದ್ದ ರಾಕ್ಷಸ ರಾಜನಾದ ರಾವಣ ರಾಮನ ಮೇಲೆ ಸೇಡು ತೀರಿಸಿಕೊಳ್ಳಲು ನಿಶ್ಚಯಿಸುತ್ತಾನೆ. ಅವನು ಕಪಟದಿಂದ ಸೀತೆಯನ್ನು ಅಪಹರಿಸಿ ತನ್ನ ದ್ವೀಪಕ್ಕೆ ಕೊಂಡೊಯ್ಯುತ್ತಾನೆ.

ಬಹಳ ಕಾಲದ ವರೆಗೆ ಸೀತೆಯನ್ನು ಹುಡುಕಿಕೊಂಡು ಅಲೆಯುತ್ತಾ ರಾಮ ಕಡೆಗೆ ಕಪಿಗಳ ಸೇನೆಯ ಸಹಾಯದಿಂದ ರಾವಣನ ಕೋಟೆಗೆ ಮುತ್ತಿಗೆ ಹಾಕಿ ಅವನನ್ನು ಕೊಂದು ಸೀತೆಯನ್ನು ಬಿಡಿಸಿಕೊಳ್ಳುತ್ತಾನೆ.

ಹೀಗೆ ಹದಿನಾಲ್ಕು ವರ್ಷಗಳು ಕಳೆಯುತ್ತವೆ. ರಾಮ ಸೀತೆಯರು ಅಯೋಧ್ಯೆಗೆ ಹಿಂತಿರುಗಿ ಬರುತ್ತಾರೆ. ಸಿಂಹಾಸನವನ್ನು ಏರಿ ರಾಮ ಆದರ್ಶ ರಾಜನಾಗಿ ತನ್ನ ರಾಜ್ಯವನ್ನು ಆಳುತ್ತಾನೆ. ಆಗ ತನ್ನ ಪ್ರಜೆಗಳಲ್ಲೊಬ್ಬನು. "ರಾಕ್ಷಸನ ಜೊತೆಯಲ್ಲಿ ಇದ್ದ ಸೀತೆಯನ್ನು ರಾಣಿಯಾಗಿ ಸ್ವೀಕರಿಸಿದ್ದು ಸರಿಯೇ?" ಎಂದು ಹೇಳಿದ ಮಾತು ರಾಮನ ಕಿವಿಗೆ ಬೀಳುತ್ತದೆ.





ರಾಮನ ಅಪ್ಪಣೆಯಂತೆ ಲಕ್ಷ್ಮಣ ಸೀತೆಯನ್ನು ಕಾಡಿಗೆ ಕರೆದುಕೊಂಡು ಹೋಗಿ ವಾಲ್ಮೀಕಿಯ ಆಶ್ರಮದ ಹತ್ತಿರ ಬಿಟ್ಟು ಹೋಗುತ್ತಾನೆ.

ವಾಲ್ಮೀಕಿ ಸೀತೆಯನ್ನು ಪ್ರೀತಿಯಿಂದ ಬರಮಾಡಿಕೊಂಡು ತನ್ನ ಆಶ್ರಮದಲ್ಲಿ ಆಕೆಗೆ ಆಶ್ರಯ ಕೊಡುತ್ತಾನೆ. ಸ್ವಲ್ಪ ಸಮಯ ಕಳೆದ ಮೇಲೆ ಸೀತೆ ಲವ ಕುಶ ಎಂಬ ಇಬ್ಬರು ಅವಳಿಜವಳಿ ಮಕ್ಕಳನ್ನು ಹಡೆಯುತ್ತಾಳೆ.

ವಾಲ್ಮೀಕಿಯ ಪ್ರೀತಿಪೂರ್ವಕವಾದ ರಕ್ಷಣೆಯಲ್ಲಿ ಆ ಇಬ್ಬರು ಹುಡುಗರೂ ಬುದ್ಧಿವಂತರೂ ವಿದ್ಯಾಸಂಪನ್ನರೂ ಆಗಿ ಬೆಳೆಯುತ್ತಾರೆ. ಈ ಕಾಲದಲ್ಲಿ ವಾಲ್ಮೀಕಿ ರಾಮಾಯಣವನ್ನು ರಚಿಸುತ್ತಿದ್ದ. ಒಂದು ದಿವಸ ಆ ಮಹಾ ಕಾವ್ಯವನ್ನು ಹಾಡಲು ಲವ ಕುಶರನ್ನು ವಾಲ್ಮೀಕಿ ರಾಮನ ಅರಮನೆಗೆ ಕರೆದುಕೊಂಡು ಹೋಗುತ್ತಾನೆ. ಅವರು ತನ್ನ ಮಕ್ಕಳೆಂದು ಕೇಳಿದಾಗ ರಾಮನಿಗೆ ಅತ್ಯಾನಂದವಾಗುತ್ತದೆ. ಸೀತೆಯನ್ನು ಹಿಂದಕ್ಕೆ ಕರೆಸಿಕೊಳ್ಳಲು ಏರ್ಪಾಟು ಮಾಡುತ್ತಾನೆ.

ಸೀತೆ ಅಯೋಧ್ಯೆಗೆ ಮರಳಿ ಬಂದಾಗ ಅಗ್ನಿ ಪರೀಕ್ಷೆಗೆ ಒಳಗಾಗಿ ತನ್ನ ಪವಿತ್ರತೆಯನ್ನು ರುಜುವಾತು ಪಡಿಸಬೇಕೆಂದು ಕೋರುತ್ತಾರೆ. ಆದರೆ



ಬದುಕಿನಲ್ಲಿ ಯಾವ ಆಶೆಯೂ ಉಳಿದಿಲ್ಲ. ತಾನು ಪವಿತ್ರಳಾಗಿದ್ದರೆ ತಿರುಗಿ ತನ್ನನ್ನು ನಿನ್ನ ಹೊಟ್ಟೆಯಲ್ಲಿಟ್ಟುಕೋ ಎಂದು ಸೀತೆ ಭೂಮಿತಾಯಿಯನ್ನು ಪ್ರಾರ್ಥಿಸುತ್ತಾಳೆ.

ತಾಯಿ ನೆಲ ಕೂಡಲೇ ತೆರೆದುಕೊಳ್ಳುತ್ತದೆ. ಸೀತೆ ಭೂಮಿಯೊಳಗೆ ಅದೃಶ್ಯಳಾಗಿ ತನ್ನ ಪವಿತ್ರತೆಯನ್ನು ರುಜುವಾತು ಪಡಿಸುವುದರ ಜೊತೆಗೇ ಸಂಶಯ ಪೀಡಿತರಾದ ಜನಕ್ಕೆ ತನ್ನನ್ನು ರಾಣಿಯಾಗಿ ಪಡೆಯುವ ಅರ್ಹತೆ ಇಲ್ಲ ಎಂಬುದನ್ನೂ ತೋರಿಸಿಕೊಡುತ್ತಾಳೆ.

ರಾಮಾಯಣಕ್ಕೆ ಇನ್ನೂ ಆಳವಾದ ಅರ್ಥವಿದೆ. ಚೆಲುವೆಯೂ ಕೋಮಲ ಸ್ವಭಾವ ದವಳೂ ಆಗಿದ್ದು, ಒಂದು ಚಕಾರವೆತ್ತದೆ ತನ್ನ ಎಲ್ಲ ಕಷ್ಟ ಕೋಟಲೆಗಳನ್ನೂ ಅನುಭವಿಸುವ ಸೀತೆಯನ್ನು ಯುಗಯುಗದಲ್ಲೂ ದಿವ್ಯ ಮಾತೆ ಎಂದು ಜನ ಪೂಜಿಸುತ್ತ ಬಂದಿದ್ದಾರೆ. ಸೀತೆ ಸತ್ಯದ ಪ್ರತಿನಿಧಿ. ಈ ಸತ್ಯವನ್ನು ಅಸತ್ಯದ ಪ್ರತಿನಿಧಿಯಾದ ರಾಕ್ಷಸ ರಾವಣನ ಹಿಡಿತದಿಂದ ರಾಮ ಬಿಡಿಸಿಕೊಳ್ಳುತ್ತಾನೆ. ರಾಮ ಸತ್ಯಕ್ಕಾಗಿ ಹೋರಾಡುವವನು. ಆದರೆ ತನ್ನ ಸಣ್ಣ ಮನಸ್ಸಿನಿಂದಾಗಿ ಮಾನವ ಸಮಾಜ ಈ ಸತ್ಯವನ್ನು ಕಳೆದುಕೊಳ್ಳುತ್ತದೆ.

ಈ ಜಗತ್ತಿನ ಸಾಹಿತ್ಯದಲ್ಲಿ ಕಂಡುಬರುವ ಧೀರೋದಾತ್ತ ನಾಯಕರ ಸಾಲಿನಲ್ಲಿ ರಾಮನ ಸ್ಥಾನ ಅದ್ವಿತೀಯ. ವಿಧೇಯತೆಗೂ ಕರ್ತವ್ಯ ನಿಷ್ಠೆಗೂ ಆತ ಒಂದು ಒಳ್ಳೆಯ ಉದಾಹರಣೆ. ಕೊಂಚವೂ ಹಿಂದೆ ಮುಂದೆ ನೋಡದೆ ಆತ ತನ್ನ ತಂದೆಗೆ ವಿಧೇಯನಾಗಿ ಸಿಂಹಾಸನಕ್ಕೆ ತನಗಿದ್ದ ಹಕ್ಕನ್ನು ಬಿಟ್ಟುಕೊಟ್ಟ. ಅವನು ಕರ್ತವ್ಯದಕ್ಷನಾದ ಗಂಡನೂ ಹೌದು. ಸೀತೆಯನ್ನು ಬಿಡಿಸಿ ಕೊಳ್ಳಲು ಏನೆಲ್ಲ ಮಾಡಲು ಸಾಧ್ಯವೋ ಅಷ್ಟನ್ನೂ ಮಾಡಿದ. ಕೊನೆಯದಾಗಿ, ಪ್ರಜೆಗಳ ಅಭಿಪ್ರಾಯಕ್ಕೆ ಮನ್ನಣೆ ಕೊಟ್ಟು ಸೀತೆ ಅಗ್ನಿಯಷ್ಟೇ ಪವಿತ್ರಳೆಂದು ತನಗೆ ತಿಳಿದಿದ್ದರೂ ಅವಳನ್ನು ಕಾಡಿಗೆ ಕಳಿಸಿ ತನ್ನ ಪ್ರಜೆಗಳ ಬಗ್ಗೆ ತನಗಿದ್ದ ಕರ್ತವ್ಯವನ್ನೂ ನೆರವೇರಿಸಿದ.

ಭಾರತೀಯರಿಗೆ ರಾಮ ಈ ಎಲ್ಲಕ್ಕಿಂತಲೂ ಹೆಚ್ಚಿನವನು. ಅವನು ವಿಷ್ಣುವಿನ ಅವತಾರಗಳಲ್ಲಿ ಒಬ್ಬ. ಸಹಾಯವನ್ನು ಕೋರಿ ಭರತನಿಗೊಂದು ಸಂದೇಶ ಕಳಿಸುವುದಕ್ಕೆ ಬದಲಾಗಿ ಕಪಿಗಳ ಸೇನೆಗೆ ನಾಯಕನಾಗಲು ಅವನು ಬಯಸಿದ್ದೂ ಅರ್ಥಪೂರ್ಣವಾದ ಸಂಗತಿ. ರಾಮನಿಗೆ ಬೇಕಾದ್ದು ಸಂಪೂರ್ಣ ಭಕ್ತಿ ಮತ್ತು ವಿಧೇಯತೆ. ಈ ಗುಣಗಳಿದ್ದದ್ದರಿಂದ ಅಷ್ಟೇನೂ ಶಿಕ್ಷಣ ಪಡೆಯದ ವಾನರರು ರಾವಣನ ಅತ್ಯಂತ ಚತುರ ಸೇನೆಯನ್ನೂ ಸೋಲಿಸಲು ಸಮರ್ಥರಾದರು. ರಾವಣನನ್ನು ಹತ್ತು ತಲೆಯವನೆಂದು ಕರೆಯುವುದು ಬಹುಶಃ ಅವನಿಗೆ ಹತ್ತು ವಿದ್ಯೆಗಳಲ್ಲಿ ಪ್ರಭುತ್ವವಿದ್ದುದರಿಂದ ಇರಬಹುದು. ಇನ್ನೆಲ್ಲ ಶಕ್ತಿಗಳಿಗಿಂತ ಸತ್ಯವೇ ಹೆಚ್ಚು ಬಲಿಷ್ಠ ಎಂಬುದೇ ರಾಮನಿಗೆ ರಾವಣನ ಮೇಲೆ ದೊರೆತ ವಿಜಯದ ಅರ್ಥ.

ಇವತ್ತಿಗೂ ಕೂಡಾ ನೂರಾರು 'ಜಾತ್ರಾ' ಮೇಳಗಳೂ ಜಾನಪದ ನಟರ ಗುಂಪುಗಳೂ ರಾಮಾಯಣದ ಕಥೆಗಳನ್ನು ಅಭಿನಯಿಸಿ ತೋರಿಸಿ ಹಳ್ಳಿಯ ಜನರನ್ನು ರಂಜಿಸುತ್ತಿದ್ದಾರೆ. ಊರಿಂದೂರಿಗೆ ಸುತ್ತುವ ಲಾವಣಿಕಾರನ ಸುತ್ತಲೂ ಹಳ್ಳಿಯ ಜನ ಉತ್ಸಾಹದಿಂದ ಸೇರಿ ನಿಂತು, ರಾತ್ರಿ ಬಹಳ ಕಾಲದ ವರೆಗೆ, ಬೆಳುದಿಂಗಳಿನ ಆಕಾಶದ ಕೆಳಗೆ ನಿಂತು ಅವನು ರಾಮನ ಶೋಕವನ್ನೂ ಹನುಮಂತನ ಪರಾಕ್ರಮವನ್ನೂ ಕುರಿತು ಹಾಡುವುದನ್ನು ಕೇಳುವ ದೃಶ್ಯ ಈಗಲೂ ಅಪರೂಪವಲ್ಲ.

ರಾಮ ಆದರ್ಶ ರಾಜ. ಅವನ ಕಾಲದಲ್ಲಿ ಪ್ರಜೆಗಳು ಸುಖಿಗಳೂ ಸಂಪನ್ನರೂ ಆಗಿದ್ದರು. ಆದ ಕಾರಣ ಈಗಲೂ ಕೂಡಾ ಸುಖ ಸಂಪತ್ತು ತುಂಬಿರುವ ಸ್ವರ್ಣ ಯುಗವನ್ನು ವರ್ಣಿಸಲು ಜನ 'ರಾಮರಾಜ್ಯ' ಎಂಬ ಮಾತನ್ನು ಉಪಯೋಗಿಸುತ್ತಾರೆ. ಅನೇಕ ಸಲ ಗ್ರಾಮ ಪಂಚಾಯತಿ ಸಭೆಗಳಲ್ಲಿ ವಿವಾದಗಳನ್ನು ಪರಿಹರಿಸಬೇಕಾಗಿ ಬಂದಾಗ ಜನ ರಾಮನ ಮೇಲೆ ಆಣೆಯಿಟ್ಟು ಸತ್ಯ ಹೇಳುತ್ತೇವೆನ್ನುತ್ತಾರೆ. ರಾಮನೆಂದರೆ ಸತ್ಯಸಂಧತೆಯ ವ್ಯಕ್ತರೂಪವೇ ಸರಿ.

ಭಾರತದ ಅತ್ಯಂತ ಮುಖ್ಯವಾದ ಕೆಲವು ಹಬ್ಬಗಳು ರಾಮನ ಜೀವನಕ್ಕೆ ಸಂಬಂಧ ಪಟ್ಟಿವೆ. ಬೆಳಕಿನ ಹಬ್ಬವಾದ ದೀಪಾವಳಿ ರಾಮ ವಿಜಯಶಾಲಿಯಾಗಿ ಅಯೋಧ್ಯೆಗೆ ಮರಳಿ ಬಂದದ್ದನ್ನು ವೈಭವಯುತವಾಗಿ ಪ್ರದರ್ಶಿಸುತ್ತದೆ. ರಾಮ ದುರ್ಗಾದೇವಿಯನ್ನು ತೀವ್ರ ಭಕ್ತಿಯಿಂದ ಆರಾಧಿಸಿ ರಾವಣನನ್ನು ಗೆಲ್ಲುವ ಶಕ್ತಿಯನ್ನು ಪಡೆದ ಸಂದರ್ಭವನ್ನು ದಸರಾ ಹಬ್ಬ ಗುರುತಿಸುತ್ತದೆ.

ರಾಮನ ಕಥೆಗೆ ಅನೇಕ ಭಾರತೀಯ ಪಾಠಗಳಿರುವ ಹಾಗೆ ಪರದೇಶಗಳಲ್ಲೂ ಬೇರೆ ಬೇರೆ ರೂಪಗಳಿವೆ. ಹದಿನೈದು ನೂರು ವರ್ಷಗಳ ಹಿಂದೆ ರಾಮಾಯಣದ ಚೀನೀ ಪಾಠ ವೊಂದು ಇತ್ತು. ಅನಂತರ ಅದರ ಟಿಬೆಟ್ ಭಾಷೆಯ ರೂಪಾಂತರ ಬಂತು. 1400 ವರ್ಷಗಳ ಹಿಂದೆ ರಾಮಾಯಣವನ್ನು ಇಲ್ಲಿ ಹಾಡಲಾಯಿತೆಂದು ಕಾಂಬೋಡಿಯಾದ ಒಂದು ದೇವಾಲಯ ವಲ್ಲಿರುವ ಶಾಸನ ತಿಳಿಸುತ್ತದೆ.

ಥಾಯ್ಲೆಂಡಿನ ಮೇಲೆ ರಾಮಾಯಣ ಎಂಥ ಪರಿಣಾಮ ಮಾಡಿತೆಂದರೆ ಆ ದೇಶ ತನ್ನ ರಾಜಧಾನಿಗೆ ರಾಮನ ರಾಜಧಾನಿ ಅಯೋಧ್ಯೆಯನ್ನು ಅನುಕರಿಸಿ ಅಯುತಿಯ ಎಂಬ ಹೆಸರನ್ನು ಇಟ್ಟಿತು. ಇಂಡೋನೇಶಿಯದಲ್ಲಿ ರಾಮಾಯಣದ ಜನಪ್ರಿಯತೆಯನ್ನು ಉತ್ಪ್ರೇಕ್ಷಿಸಲು ಸಾಧ್ಯವಿಲ್ಲ. ಇಂದಿಗೂ ಕೂಡಾ ಇಂಡೋನೇಶಿಯಾದ ಪ್ರಖ್ಯಾತ ಛಾಯಾ ನೃತ್ಯಗಳು ಸಾಮಾನ್ಯವಾಗಿ ರಾಮಾಯಣದ ಯಾವುದಾದರೊಂದು ಕಥೆಯನ್ನು ಆಧರಿಸಿರುತ್ತದೆ. ಅನೇಕ

ಸಹಸ್ರ ವರ್ಷಗಳ ಹಿಂದೆ ಭಾರತದ ವ್ಯಾಪಾರಿಗಳೂ ಸಾಂಸ್ಕೃತಿಕ ರಾಯಭಾರಿಗಳೂ ರಾಮಾಯಣದ ಕಥೆಯನ್ನು ಏಷ್ಯಾದ ದೇಶಗಳಿಗೆ ತೆಗೆದುಕೊಂಡು ಹೋದರು. ಆ ದೇಶಗಳ ಕವಿಗಳೂ ಗ್ರಂಥಕರ್ತರೂ ಮೂಲ ಕಥೆಗೆ ತಮ್ಮ ತಮ್ಮ ಕಲ್ಪನೆಗಳನ್ನೂ ಸ್ಥಳೀಯ ಕಥೆಗಳನ್ನೂ ಸೇರಿಸಿ ಈ ಮಹಾ ಕಾವ್ಯದ ಬೇರೆ ಬೇರೆ ಬಣ್ಣ ಬಣ್ಣದ ರೂಪಾಂತರಗಳನ್ನು ರಚಿಸಿದರು.

ಈ ಜಗತ್ತಿನ ಸಾಹಿತ್ಯ ಚರಿತ್ರೆಯಲ್ಲಿ ರಾಮಾಯಣಕ್ಕೇ ಒಂದು ವಿಶೇಷ ಸ್ಥಾನವಿದೆ. ಇನ್ನು ಯಾವ ಕೃತಿಯೂ ಇಷ್ಟೊಂದು ಪಾಠಾಂತರ ರೂಪಾಂತರಗಳಿಗೆ ಸ್ಫೂರ್ತಿ ಕೊಟ್ಟಿಲ್ಲ. ಇನ್ನು ಯಾವ ಕಥೆಗೂ ಪರದೇಶಗಳಲ್ಲೂ ಇಷ್ಟೊಂದು ಜನಪ್ರಿಯತೆ ಲಭಿಸಿಲ್ಲ.



# ಮಹಾಭಾರತ

ಒಂದು ಹಳ್ಳಿಯಲ್ಲಿ ಒಬ್ಬ ಚಿಕ್ಕ ಹುಡುಗ ಒಂದು ದಿನ ತುಂಬ ವಿಚಿತ್ರನಾದೊಬ್ಬ ಮನುಷ್ಯ ನನ್ನು ನೋಡಿದ. ಅವನಿಗೆ ಭಯಂಕರವಾದ ಭಾರೀ ಮೀಸೆ; ಕತ್ತೆತ್ತಿ ನೋಡಬೇಕಾದಷ್ಟು ಎತ್ತರ; ದಷ್ಟಪುಷ್ಟವಾದ ಬಲಿಷ್ಠ ಶರೀರ. ಹುಡುಗ ತುಂಬ ಉದ್ರೇಕಗೊಂಡು ತನ್ನ ತಾಯಿಯ ಬಳಿಗೆ ಓಡಿ ಹೋಗಿ, "ಅಮ್ಮಾ, ನಾನೀಗ ಭೀಮನನ್ನು ಕಂಡೆ" ಎಂದ.

ನಿಮಗೆ ಗೊತ್ತಿರುವ ಹಾಗೆ ಭೀಮ **ಮಹಾಭಾರತ**ದಲ್ಲಿ ಬರುವ ಮಹಾವೀರರಲ್ಲಿ ಒಬ್ಬ. **ರಾಮಾಯಣ ಮಹಾಭಾರತ**ಗಳನ್ನು ಬರೆದು ಅನೇಕ ಶತಮಾನಗಳು ಕಳೆದಿವೆ ಯಾದರೂ ಭಾರತದ ಮಕ್ಕಳಿಗೆ ಮಹಾಭಾರತದ ಪಾತ್ರಗಳೆಲ್ಲ ಇಂದಿಗೂ ಜೀವಂತವಾಗಿವೆ. ಶಂಖ ಚಕ್ರಗಳನ್ನು ಧರಿಸಿರುವ ಶ್ರೀ ಕೃಷ್ಣ; ಬಲು ದೊಡ್ಡದಾಗಿ ಹೊಳೆಯುತ್ತಿರುವ ಬಿಲ್ಲನ್ನು ಹಿಡಿದ ಅರ್ಜುನ; ಬಹು ಭಯಂಕರನಾಗಿರುವ ಭೀಮ; ಬಲಿಷ್ಠನಾಗಿದ್ದರೂ ಕರುಣಾಳು ವಾಗಿರುವ ರಾಮ; ಏನೊಂದೂ ಆಯಾಸವಿಲ್ಲದೆ ಪರ್ವತವನ್ನೇ ಬೇರು ಸಹಿತ ಕಿತ್ತು ನೂರಾರು ಮೈಲಿಗಳ ದೂರ ಹೊತ್ತು ಹೋಗಬಲ್ಲ ಹನುಮಂತ—ಈ ಎಲ್ಲರೂ ಅವರು ಪ್ರತಿನಿತ್ಯ ನೋಡುತ್ತಿರುವ ಜನರಷ್ಟೇ ನಿಜವಾದವರು.

ಸಂಕ್ಷೇಪವಾಗಿ **ಮಹಾಭಾರತ**ದ ಕಥೆ ಹೀಗಿದೆ:

ಹಸ್ತಿನಾಪುರದ ದೊರೆಯಾದ ಸಂತಾನುವಿಗೆ ಇಬ್ಬರು ಮೊಮ್ಮಕ್ಕಳು; ಧೃತರಾಷ್ಟ್ರ, ಪಾಂಡು. ಹಿರಿಯನಾದ ಧೃತರಾಷ್ಟ್ರ ಕುರುಡ. ಆದ ಕಾರಣ ಪಾಂಡು ಪಟ್ಟಕ್ಕೆ ಬಂದ.

ಆದರೆ ಒಂದು ದಿನ ಶಾಪದ ಫಲವಾಗಿ ಪಾಂಡು ಅನೇಕ ವರ್ಷ ಕಾಲ ತನ್ನಿಬ್ಬರು ರಾಣಿ ಯರೊಡನೆ ಕಾಡಿನಲ್ಲಿ ಇರಬೇಕಾಗಿ ಬಂತು. ಕಾಡಿನಲ್ಲಿದ್ದಾಗಲೇ ಅವನಿಗೆ ಐದು ಮಂದಿ

ಗಂಡು ಮಕ್ಕಳು ಹುಟ್ಟಿದರು. ಯುಧಿಷ್ಠಿರ, ಅರ್ಜುನ, ಭೀಮ, ನಕುಲ, ಸಹದೇವ ಎಂದು ಹೆಸರಿದ್ದ ಈ ಹುಡುಗರಿಗೆ ಕಾಡಿನಲ್ಲಿದ್ದ ಜ್ಞಾನಿಗಳಾದ ಋಷಿಗಳಿಂದ ವಿದ್ಯಾಭ್ಯಾಸ ನಡೆಯಿತು.

ಪಾಂಡು ಮೃತಪಟ್ಟ ಮೇಲೆ ರಾಣಿಯರೂ ಅವರ ಮಕ್ಕಳಾದ ಪಾಂಡವರೂ ಹಸ್ತಿನಾಪುರಕ್ಕೆ ಹಿಂತಿರುಗಿ ಬಂದರು.

ದುರ್ದೈವದಿಂದ ಧೃತರಾಷ್ಟ್ರನ ನೂರು ಮಂದಿ ಮಕ್ಕಳಾದ ಕೌರವರಿಗೆ ಪಾಂಡವರ ಬಗ್ಗೆ ತುಂಬ ಹೊಟ್ಟೆ ಕಿಚ್ಚು ಹುಟ್ಟಿತು. ಕೌರವರು ದುಷ್ಟ ಬುದ್ಧಿಯಿಂದ ಈ ಐವರು ಅಣ್ಣ ತಮ್ಮಂದಿರನ್ನು ಅನೇಕ ರೀತಿಯಿಂದ ಕುಚೇಷ್ಟೆಗೆ ಗುರಿಮಾಡಿ ಕಾಡಿದರು. ಕ್ಷಮಾಶೀಲನೂ ತುಂಬ ತಾಳ್ಮೆಯುಳ್ಳವನೂ ಆಗಿದ್ದ ಯುಧಿಷ್ಠಿರನ ಮಾತನ್ನು ಮನ್ನಿಸಿ ಪಾಂಡವರು ಕೌರವರ ಕುಚೇಷ್ಟೆಗೆ ಪ್ರತೀಕಾರ ಮಾಡಲು ಹೋಗಲಿಲ್ಲ.



ಹುಡುಗರಿಗೆ ವಯಸ್ಸು ಬಂದ ಮೇಲೆ ಪೂಜ್ಯ ಭೀಷ್ಮರು ಎಲ್ಲರಿಗೂ ತೃಪ್ತಿಕರವಾದೊಂದು ವ್ಯವಸ್ಥೆಗೆ ಅವರು ಒಪ್ಪುವ ಹಾಗೆ ಮಾಡಿದರು. ಆ ಪುರಾತನ ರಾಜ್ಯದ ಅರ್ಧ ಭಾಗವನ್ನು ಕೌರವರಲ್ಲಿ ಹಿರಿಯನಾದ ದುರ್ಯೋಧನ ಹಸ್ತಿನಾಪುರದಲ್ಲಿದ್ದು ಆಳತೊಡಗಿದ. ಪಾಂಡವರಲ್ಲಿ ಹಿರಿಯನಾದ ಯುಧಿಷ್ಠಿರ ಉಳಿದ ಅರ್ಧ ಭಾಗವನ್ನು ಇಂದ್ರಪ್ರಸ್ಥದಲ್ಲಿದ್ದು ಆಳತೊಡಗಿದ.

ಕೆಲವು ವರ್ಷಗಳು ಶಾಂತಿಯಲ್ಲಿ ಕಳೆದುವು. ಆ ಮೇಲೆ ಒಂದು ದಿವಸ ಕೌರವರು ಪಾಂಡವರನ್ನು ಪಗಡೆ ಜೂಜಾಟಕ್ಕೆ ಕರೆದರು. ಆಟದಲ್ಲಿ ಪಾಂಡವರು ಸೋತರು. ಆ ಮೊದಲೇ ಎರಡೂ ಕಡೆಯವರು ಒಪ್ಪಿದ್ದ ಶರತ್ತಿಗನುಸಾರವಾಗಿ ಪಾಂಡವರು ತಮ್ಮ ರಾಜ್ಯವನ್ನು ಬಿಟ್ಟು ಹನ್ನೆರಡು ವರ್ಷಗಳ ವನವಾಸವನ್ನೂ ಒಂದು ವರ್ಷದ ಅಜ್ಞಾತವಾಸವನ್ನೂ ಕೈಗೊಳ್ಳಬೇಕಾಯಿತು.

ಅವರು ವನವಾಸ ಮುಗಿದು ಹಿಂತಿರುಗಿ ಬಂದಾಗ ಅವರ ರಾಜ್ಯದ ಭಾಗವನ್ನು ಬಿಟ್ಟು ಕೊಡಲು ದುರ್ಯೋಧನ ನಿರಾಕರಿಸಿದ. ವಿವಾದವನ್ನು ಶಾಂತಿಯಿಂದ ಬಗೆಹರಿಸಲು ನಡೆಸಿದ ಯತ್ನಗಳೆಲ್ಲ ವಿಫಲವಾಗಿ ಕುರುಕ್ಷೇತ್ರದಲ್ಲಿ ಭಯಂಕರವಾದ ಯುದ್ಧ ನಡೆದು ರಕ್ತದ ಕೋಡಿ ಹರಿಯಿತು. ಇನ್ನೇನು ಯುದ್ಧ ಶುರುವಾಗಬೇಕು ಎನ್ನುವಾಗ ತನ್ನ ದಾಯಾದಿಗಳನ್ನೂ



ಬಂಧುಬಾಂಧವರನ್ನೂ ಕೊಲ್ಲಬೇಕಲ್ಲ ಎಂಬ ಯೋಚನೆಯಿಂದ ಅರ್ಜುನ ವಿಷಣ್ಣನಾಗಿ ಯುದ್ಧದಿಂದ ಹಿಂದೆಗೆಯಲು ಬಯಸಿದ. ಆದರೆ ವೈಯಕ್ತಿಕವಾದ ತನ್ನ ಸ್ವಂತ ಲಾಭದ ಆಶೆಯಿಲ್ಲದೆ ಸತ್ಯಕ್ಕಾಗಿ ಯುದ್ಧ ಮಾಡುವುದು ನ್ಯಾಯವೂ ಅಗತ್ಯವೂ ಎಂಬುದನ್ನು ಶ್ರೀ ಕೃಷ್ಣ ಅವರಿಗೆ ವಿವರಿಸಿ ಹೇಳಿದ.



ಶ್ರೀ ಕೃಷ್ಣ ಅರ್ಜುನನಿಗೆ ಕೊಟ್ಟ ಈ ವಿವರಣೆಯೇ **ಗೀತೆ**ಯೆಂದು ಹೆಸರಾಗಿದೆ. ಕಾಲಕಾಲಕ್ಕೂ ಗೀತೆ ಅಸಂಖ್ಯ ಜನರಿಗೆ ಆಧ್ಯಾತ್ಮಿಕ ಶಕ್ತಿಯ ಮೂಲವಾಗಿ ಬಂದಿದೆ. ಯುದ್ಧಕಾಲದಲ್ಲಿ ಶ್ರೀ ಕೃಷ್ಣ ಅರ್ಜುನನ ಸಾರಥಿಯೂ ಮಾರ್ಗದರ್ಶಕನೂ ಆಗಿ ಕೆಲಸ ಮಾಡಿದ.

ಕೌರವರು ಸಂಪೂರ್ಣವಾಗಿ ಸೋತು ಹೋದರು. ಯುಧಿಷ್ಠಿರನಿಗೆ ರಾಜ್ಯಾಭಿಷೇಕ



ಆಯಿತು. ಆದರೆ ಈ ಲೋಕದಲ್ಲಿ ದೊರೆಯುವ ವಿಜಯವೂ ಏಳಿಗೆಯೂ ಮುಖ್ಯವಲ್ಲ ಎಂಬ ಸಂಗತಿ ಪಾಂಡವರಿಗೆ ಮನದಟ್ಟಾಯಿತು. ಆದ ಕಾರಣ ಮೂವತ್ತಾರು ವರ್ಷಗಳ ಕಾಲ ನ್ಯಾಯವಾಗಿಯೂ ವಿವೇಕದಿಂದಲೂ ರಾಜ್ಯಭಾರ ಮಾಡಿ ಅವರು ತಮ್ಮ ಮೊಮ್ಮಗ ಪರಿಕ್ಷಿತನಿಗೆ ಪಟ್ಟ ಕಟ್ಟಿ ಹಿಮಾಲಯದ ಕಡೆಗೆ ಹೊರಟರು.

ಗೊತ್ತಿಲ್ಲದ ಪ್ರದೇಶಗಳ ನಡುವೆ ಸಾಗುತ್ತಿದ್ದ ಕಷ್ಟದಾಯಕವಾದ ಈ ಪ್ರಯಾಣಕಾಲದಲ್ಲಿ ಯುಧಿಷ್ಠಿರನ ತಮ್ಮಂದಿರೂ ರಾಣಿ ದ್ರೌಪದಿಯೂ ಸೋತು ಸುಸ್ತಾಗಿ ಬಿದ್ದು ಮೃತರಾದರು. ಯುಧಿಷ್ಠಿರನೊಬ್ಬನೇ ಸಾಯದೆ ಉಳಿದವನು. ಅವನು ಸ್ವರ್ಗವನ್ನು ಸೇರಿದ. ಅತ್ಯುನ್ನತವಾದ ಆಧ್ಯಾತ್ಮಿಕ ಗುರಿಯನ್ನು ಮುಟ್ಟಲು, ಎಲ್ಲರೂ ತಿಳಿದಿರುವಂತೆ, ಈ ದೇಹ ಯಾವಾಗಲೂ ಒಂದು ಅಡಚಣೆ ಅಲ್ಲ ಎಂಬುದನ್ನು ಈ ಸಂಗತಿ ಸೂಚಿಸುತ್ತದೆ.

**ಮಹಾಭಾರತ**ದಲ್ಲಿ ಹಲವು ಕಥೆಗಳಿವೆ. ಅವೆಲ್ಲವೂ ತುಂಬ ಅರ್ಥಗರ್ಭಿತವಾದ ಕಥೆಗಳು. ಜೀವನದ ಅಷ್ಟೊಂದು ಮುಖಗಳನ್ನೂ ಅಂಗಗಳನ್ನೂ **ಮಹಾಭಾರತ** ತೆರೆದು ತೋರುವಂತೆ, ನಮಗೆ ಕಾಣಿಸುವ ಪುಸ್ತಕ ಈ ಜಗತ್ತಿನಲ್ಲಿ ಬೇರೊಂದು ಇಲ್ಲ. "**ಮಹಾಭಾರತ**ದಲ್ಲಿ ಇಲ್ಲದೆ ಇರುವುದು ಭಾರತದಲ್ಲೇ ಇಲ್ಲ" ಎಂಬ ಗಾದೆ ಇದೆ. ಆದ ಕಾರಣ ಭಾರತದೇಶ ಏನೇನಾಗಿದೆಯೋ ಅಥವಾ ಆಗಿತ್ತೋ ಅದರ ಸಾರವೇ **ಮಹಾಭಾರತ** ಎಂದು ಹೇಳಬಹುದು.

ಬಲು ದೊಡ್ಡ ಋಷಿ ವ್ಯಾಸ ಮಹಾಭಾರತದ ಲೇಖಕ. ಈ ಮಹಾಕಾವ್ಯವನ್ನು ಬರೆಯಲು ನಿರ್ಧರಿಸಿದಾಗ ತಾನು ತನ್ನ ಕಾವ್ಯ ಸೃಷ್ಟಿಯ ಆವೇಶದಲ್ಲಿ ಪದ್ಯಗಳನ್ನು ರಚಿಸುತ್ತ ಹೋದ ಹಾಗೆ ಅವುಗಳನ್ನು ತತ್ಕ್ಷಣ ಬರೆದಿಡಬಲ್ಲವನ ಅಗತ್ಯ ವ್ಯಾಸನಿಗೆ ಕಂಡಿತು. ತನಗೆ ಸಹಾಯ ಮಾಡಬೇಕೆಂದು ಗಣೇಶ ದೇವರನ್ನು ಪ್ರಾರ್ಥಿಸಿಕೊಂಡ. ಕವಿಯ ಬಾಯಿಯಿಂದ ಹೊರಡುವ ಶಬ್ದಗಳು ನಿಂತು ಹೋಗಿ ತನ್ನ ಬರವಣಿಗೆಯೂ ನಿಲ್ಲುವಂತಾಗಬಾರದೆಂಬ ಶರತ್ತಿನ ಮೇಲೆ ಗಣೇಶ ಈ ಕೆಲಸ ಮಾಡಲು ಒಪ್ಪಿಕೊಂಡ. ತನಗೆ ಸಂಪೂರ್ಣ ಅರ್ಥವಾಗದೆ ಗಣೇಶ ಏನನ್ನೂ ಬರೆಯಬಾರದು ಎಂಬ ಶರತ್ತಿನ ಮೇಲೆ ಕವಿಯೂ ಅದಕ್ಕೆ ಒಪ್ಪಿದ.

ಹೀಗೆ ಹದಿನೆಂಟು ಪರ್ವಗಳಲ್ಲಿ 90,000 ಶ್ಲೋಕಗಳಿರುವ **ಮಹಾಭಾರತ** ರಚಿತವಾಯಿತು.

# ಪುರಾಣಗಳು

"ಅನಂತರ ಮಳೆ ಬಂತು. ಮನುಷ್ಯನ ಅಹಂಕಾರ ಅವನ ಆತ್ಮವನ್ನು ಕವಿಯುವ ಹಾಗೆ ಕಪ್ಪು ಮೋಡಗಳು ಚಂದ್ರನನ್ನು ಮುಸುಕಿದುವು. ದೈವೀ ಕಾರುಣ್ಯದಂತೆ ಅದು ಸುರಿಯಿತು. ಎಲ್ಲವೂ ಹೊಚ್ಚ ಹೊಸತು, ಸಂಪದ್ಭರಿತ. ಸುಂದರ.

"ಅನಂತರ ಶರತ್ಕಾಲ ಬಂತು. ಧ್ಯಾನದಲ್ಲಿರುವ ಮನಸ್ಸಿನಂತೆ ಆಕಾಶವೂ ಜಲವೂ ಸ್ವಚ್ಛವಾದುವು. ಅಜ್ಞಾನಿಗಳ ಮಿಥ್ಯಾವಿಚಾರಗಳಂತೆ ರಸ್ತೆಯಲ್ಲಿ ತುಂಬಿದ್ದ ಕೆಸರು ನಿಧಾನವಾಗಿ ಅದೃಶ್ಯವಾಯಿತು. ತನ್ನನ್ನು ತಾನೇ ಸಾಕ್ಷಾತ್ಕರಿಸಿಕೊಂಡ ಆತ್ಮದಂತೆ ಸಮುದ್ರ ಪ್ರಶಾಂತವಾಗಿತ್ತು. ನಿಜವಾದ ತಿಳಿವಳಿಕೆಯಂತೆ ಚಂದ್ರ ಪ್ರಕಾಶಿಸತೊಡಗಿದ."

ಇದು ಪುರಾಣಗಳಲ್ಲೆಲ್ಲ ಅತ್ಯಂತ ಜನಪ್ರಿಯವಾದ ಭಾಗವತದಿಂದ ಎತ್ತಿಕೊಂಡ ಅವತರಣಿಕೆ. ಪ್ರಕೃತಿಯ ಬೇರೆ ಬೇರೆ ಅವಸ್ಥೆಗಳಿಗೂ ಮಾನವ ಮನಸ್ಸಿನ ಬೇರೆ ಬೇರೆ ಅವಸ್ಥೆಗಳಿಗೂ ಇರುವ ಸಾಮ್ಯವನ್ನು ಇಲ್ಲಿ ಕವಿ ತೋರಿಸುತ್ತಾನೆ. ಇದೇ ಶೈಲಿ ಪುಸ್ತಕದುದ್ದಕ್ಕೂ ಹರಿಯುತ್ತದೆ.

ಕಾಡುಗಳ ನಡುವಿನಿಂದ ದೈವೀ ಬಾಲಕ ಶ್ರೀ ಕೃಷ್ಣನ ಮಾಂತ್ರಿಕ ಕೊಳಲಿನ ಉಲಿ ಕೇಳಿಸುತ್ತದೆ. ಹಸುಗಳು, ದನ ಕಾಯುವವರು, ಗೋಪಿಯರು—ಯಮುನಾ ನದಿಯೂ ಕೂಡಾ—ಸಂತೋಷದಿಂದ ಹುಚ್ಚರಾಗಿ ಕೊಳಲಿನ ಗಾನವನ್ನು ಆಲಿಸಿ ಕೇಳುತ್ತಾರೆ. ಇದು ಕೇವಲ ಕವಿ ಕಲ್ಪನೆಯ ಸೃಷ್ಟಿ ಎಂದು ತಿಳಿಯಲಾಗದು. ಅದಕ್ಕೆ ಆಳವಾದ ಒಳ ಅರ್ಥವೂ ಇದೆ. ಕೊಳಲು ದೈವಿಕವಾದದ್ದರ ಕರೆ: ಅದಕ್ಕೆ ಎಲ್ಲ ಪ್ರಕೃತಿಯೂ, ಎಲ್ಲ ಜೀವ ಜಂತುಗಳೂ ತಮ್ಮ ಆತ್ಮದ ಮೂಲಕ ಗಮನ ಹರಿಸಲೇ ಬೇಕು.



ಶ್ರೀ ಕೃಷ್ಣನ ಜೀವನದ ಅನೇಕಾನೇಕ ಪ್ರಸಂಗಗಳ ಕಥೆಗಳನ್ನು **ಭಾಗವತ** ನಮಗೆ ಹೇಳುತ್ತದೆ. ಪ್ರತಿ ಪ್ರಸಂಗಕ್ಕೂ ಆಳವಾದ ಅರ್ಥವಿದೆ.

ಬಹುಶಃ ಕ್ರಿಸ್ತ ಶಕ ಒಂದನೆ ಶತಮಾನದಿಂದ ಆರನೆಯ ಶತಮಾನದ ವರೆಗಿನ ಕಾಲದಲ್ಲಿ ರಚಿತವಾದ **ಪುರಾಣ**ಗಳಲ್ಲಿ **ಭಾಗವತ** ಒಂದು. ಆದರೆ ಅವುಗಳಲ್ಲಿ ಕೊನೆಯ ಪಕ್ಷ ಒಂದು, ವ್ಯಾಸನಿಂದ ರಚಿತವಾಯಿತೆಂದು ಹೇಳಲಾಗುವ, ಮೂಲ ಪುರಾಣ ಇನ್ನೂ ಪುರಾತನವಾಗಿರ ಬೇಕು. ವ್ಯಾಸನ ಕೃತಿಯಿಂದ ವಿಚಾರಗಳನ್ನೂ ಸ್ಫೂರ್ತಿಯನ್ನೂ ಪಡೆದು ಆತನ ಶಿಷ್ಯರೂ, ಶಿಷ್ಯರ ಶಿಷ್ಯರೂ ತಮ್ಮ ತಮ್ಮ ಸರದಿಯಂತೆ ಒಟ್ಟು ಮೂವತ್ತಾರು **ಪುರಾಣ**ಗಳನ್ನು ರಚಿಸಿ ದರು. ಇವುಗಳಲ್ಲಿ ಮುಖ್ಯವಾದುವುಗಳನ್ನು **ಮಹಾಪುರಾಣ**ಗಳೆಂದೂ ಉಳಿದುವನ್ನು **ಉಪಪುರಾಣ**ಗಳೆಂದೂ ಕರೆಯುತ್ತಾರೆ. **ವಿಷ್ಣು, ಭಾಗವತ, ನಾರದೀಯ, ಗರುಡ, ಪದ್ಮ, ವರಾಹ, ಅಗ್ನಿ, ಮಾರ್ಕಾಂಡೇಯ, ಭವಿಷ್ಯ, ವಾಮನ, ವಾಯು, ಲಿಂಗ, ಸ್ಕಾಂದ, ಮತ್ಸ್ಯ,** ಮತ್ತು **ಕೂರ್ಮಪುರಾಣ**—ಇವು **ಮಹಾಪುರಾಣ**ಗಳು.

'ಪುರಾಣ' ಎಂಬ ಸಂಸ್ಕೃತ ಶಬ್ದಕ್ಕೆ 'ಎಲ್ಲ ಕಾಲಕ್ಕೂ ಹೊಸತಾಗಿಯೇ ಇರುವ ಹಳೆಯ ಕಥೆಗಳು' ('ಪುರಾನ್ ಅಪಿ ನವಂ' ಎಂದರೆ 'ಪುರಾತನವಾದರೂ ನೂತನ') ಎಂಬ ಅರ್ಥವಿದೆ.

ಪುರಾಣಗಳೆಲ್ಲ ಮಹಾದೇವರುಗಳಾದ ಬ್ರಹ್ಮ, ವಿಷ್ಣು, ಶಿವರ ಕೃತಿಗಳನ್ನೂ ಗುಣಗಳನ್ನೂ ಮುಖ್ಯವಾಗಿ ವರ್ಣಿಸುತ್ತವಾದರೂ ಅವು ಇನ್ನೂ ಹಲವಾರು ವಿಷಯಗಳನ್ನೂ ಒಳಗೊಂಡಿವೆ. ಭೂಮಿಯ ಸ್ಥಾನ ಎಂಥದು ಎಂಬ ಸಮಸ್ಯೆಯನ್ನು ಪಾಶ್ಚಾತ್ಯರು ಗಣನೆಗೆ ತಂದುಕೊಳ್ಳುವುದಕ್ಕೆ ಬಹಳ ಬಹಳ ಕಾಲದ ಹಿಂದೆಯೇ ಸೂರ್ಯ ಮಂಡಲದ ಕೇಂದ್ರ ಭೂಮಿಯಲ್ಲ, ಸೂರ್ಯನೇ ಎಂದು ವಿಷ್ಣು ಪುರಾಣ ಹೇಳಿರುವುದು ತುಂಬ ಆಸಕ್ತಿ ಹುಟ್ಟಿಸುವ ಸಂಗತಿ ಅಲ್ಲವೇ?

ವಿಶ್ವದ ಸೃಷ್ಟಿಯಾದದ್ದು ಹೇಗೆ? ಅದು ಹೇಗೆ ಸ್ಥಿರವಾಗಿ ನಿಂತಿದೆ. ಯುಗಚಕ್ರದ ಕೊನೆಯಲ್ಲಿ ಎಲ್ಲವೂ ಲಯವಾಗಿ ಹೇಗೆ ಹೊಸಸೃಷ್ಟಿ ಆರಂಭವಾಗಲು ದಾರಿ ಸಿದ್ಧವಾಗುತ್ತದೆ ಎಂಬ ಈ ವಿಚಾರಗಳನ್ನು **ಪುರಾಣ**ಗಳು ವಿಸ್ತಾರವಾಗಿ ಚರ್ಚಿಸುತ್ತವೆ.

ಆದರೆ ಪುರಾಣಗಳು ಉದ್ದಕ್ಕೂ ಇಷ್ಟು ತಾತ್ವಿಕವೂ ವೈಜ್ಞಾನಿಕವೂ ಆದ ವಿಷಯಗಳನ್ನೇ ಚರ್ಚಿಸುತ್ತವೆ ಅಂತ ಅಲ್ಲ. ಉದಾಹರಣೆಗೆ ಹೇಳುವುದಾದರೆ **ಗರುಡ ಪುರಾಣ** ವಿವಿಧ ಔಷಧಿಗಳನ್ನು ಕುರಿತೂ, ನಮ್ಮ ದೇಹವನ್ನು ಆರೋಗ್ಯವಾಗಿಟ್ಟುಕೊಳ್ಳುವ ರೀತಿಗಳನ್ನು ಕುರಿತೂ ನಮಗೆ ವಿವರಿಸಿ ಹೇಳುತ್ತದೆ.

**ಮಹಾಪುರಾಣ, ಉಪಪುರಾಣ**ಗಳಲ್ಲದೆ ಮೂರನೆಯ ಇನ್ನೊಂದು ವರ್ಗದ ಪುರಾಣಗಳೂ ಇವೆ. ಅವಕ್ಕೆ **ಸ್ಥಳಪುರಾಣ**ಗಳೆಂದು ಹೆಸರು. ಭಾರತದ ಅನೇಕಾನೇಕ ಪುಣ್ಯ ಕ್ಷೇತ್ರಗಳ ವೈಭವವನ್ನೂ ಪ್ರಾಮುಖ್ಯವನ್ನೂ ಇವು ವರ್ಣಿಸಿ ಹೇಳುತ್ತವೆ. ಭಾರತದ ಸಂಪ್ರದಾಯದ



ಮತ್ತು ಇತಿಹಾಸದ ಭಂಡಾರಗಳಾದ ಈ ಸಣ್ಣ ಪುರಾಣಗಳು ಹಿಮಾಲಯದಿಂದ ಕನ್ಯಾಕುಮಾರಿಯ ವರೆಗೆ ಅಸಂಖ್ಯವಾಗಿ ಹಬ್ಬಿರುವ ಪುಣ್ಯ ತೀರ್ಥಕ್ಷೇತ್ರಗಳಿಗೆ ಯಾತ್ರೆ ಹೋಗುವಂತೆ ನೂರಾರು ವರ್ಷಗಳಿಂದ ಭಾರತದ ಜನರನ್ನು ಪ್ರೇರಿಸುತ್ತ ಬಂದಿವೆ.

ನಿಜವಾಗಿ ನೋಡಿದರೆ ಪುರಾಣ ಕರ್ತರ ದೃಷ್ಟಿಯಲ್ಲಿ ಇಡೀ ಭಾರತ ದೇಶವೇ ಪವಿತ್ರವಾದ ಮಹಾ ಮಾತೆಯ ಶರೀರ **ಕಾಲಿಕಾಪುರಾಣ**ದಲ್ಲಿ ಬರುವ ಒಂದು ಅರ್ಥಪೂರ್ಣ ಕಥೆಯಲ್ಲಿ ಈ ಕಲ್ಪನೆ ತುಂಬ ಚೆನ್ನಾಗಿ ವ್ಯಕ್ತವಾಗಿದೆ.

ಹಿಮಾಲಯದ ಒಡಲಲ್ಲಿದ್ದ ಒಂದು ಪುರಾತನ ರಾಜ್ಯದಲ್ಲಿ, ದಕ್ಷನೆಂಬ ಎಳೆಯ ರಾಜಕುಮಾರನಿದ್ದ. ಅವನು ದೈವೀಮಾತೆ ಮಹಾಮಾಯೆಯ ಭಕ್ತ ರಾಜಕುಮಾರನ ಭಕ್ತಿಗೆ ಮೆಚ್ಚಿದ ಮಾತೆ ಅವನಿಗೊಂದು ವರ ಕೊಡಲು ಒಪ್ಪಿದಳು. ದೇವಿಯೇ ತನ್ನ ಮಗಳಾಗಿ ಹುಟ್ಟಬೇಕೆಂದು ಆತ ಕೇಳಿಕೊಂಡ.

ದೇವಿ ಅದಕ್ಕೆ ಒಪ್ಪಿಕೊಂಡು ಈ ಮಾತು ಸೇರಿಸಿದಳು: "ನಾನು ಮನುಷ್ಯ ರೂಪದಲ್ಲಿ ಬಂದಿರುವಾಗ



ನೀನು ನನ್ನ ದೈವಿಕತೆಯನ್ನು ಮರೆತು ನನಗೆ ತಕ್ಕ ಗೌರವ ತೋರಿಸದೆ ಹೋದರೆ ನಾನು ಆ ಕ್ಷಣವೇ ನನ್ನ ದೇಹವನ್ನು ಬಿಟ್ಟು ಹೋಗುತ್ತೇನೆ."

"ನಾನು ಅದನ್ನು ಮರೆಯುವ ಸುಂಭವವಾದರೂ ಎಲ್ಲಿದೆ?" ಎಂದು ದಕ್ಷ ಪ್ರತಿಭಟಿಸಿದ.

ಕಾಲಕ್ರಮದಲ್ಲಿ ದಕ್ಷ ರಾಜನಾದ ಮೇಲೆ ದೇವಿ ಮನುಷ್ಯ ರೂಪ ತಳೆದು ಅವನ ಮಗಳಾಗಿ ಹುಟ್ಟಿದಳು. ತುಂಬ ಚೆಲುವೆಯಾಗಿದ್ದ ಅವಳಿಗೆ ಸತಿ ಎಂದು ಹೆಸರಿಟ್ಟರು.

ದಕ್ಷ ತನ್ನ ಮಗಳನ್ನು ತುಂಬ ಪ್ರೀತಿಸುತ್ತಿದ್ದನೆನ್ನುವುದರಲ್ಲಿ ಸಂದೇಹವಿರಲಿಲ್ಲ ಆದರೆ ಆಕೆ ಬೆಳೆದು ದೊಡ್ಡವಳಾದಾಗ ಅವಳು ತನ್ನ ಮಗಳಷ್ಟೇ ಅಲ್ಲ ಎಂಬ ನಿಜವನ್ನು ಮರೆತ. ದೇವತೆಗಳು ಮಧ್ಯಸ್ಥಿಕೆ ವಹಿಸಿದ್ದರಿಂದ ಯಾವಾಗಲೂ ಅನ್ಯಮನಸ್ಕನಾಗಿರುತ್ತಿದ್ದ ಶಿವನಿಗೆ ಅವಳನ್ನು ಮದುವೆ ಮಾಡಿ ಕೊಟ್ಟ. ಆದರೆ ಇದರಿಂದ ದಕ್ಷನಿಗೆ ಸಂತೋಷವಾಗಲಿಲ್ಲ.

ಒಂದು ಗೂಳಿ, ಕೆಲವು ಸರ್ಪಗಳು, ಭೂತಗಳ ಗುಂಪು—ಇವುಗಳ ಜೊತೆಗೆ ಶಿವ ಒಂದು ಪರ್ವತದ ಶಿಖರದಲ್ಲಿ ವಾಸಿಸುತ್ತಿದ್ದ. ಅತಿಥಿಗಳನ್ನು ಕರೆದು ಸತ್ಕರಿಸಲು ಯೋಗ್ಯವಾದಂಥ ಮನೆ ಅವನಿಗಿರಲಿಲ್ಲ. ತನ್ನ ಮಗಳು ಈ ರೀತಿ ಬಂಧುಬಳಗದವರು ಬಂದು ನೋಡಲು ಹಿಂದೆ ಮುಂದೆ ನೋಡಬಹುದಾದಂಥ ಕಡೆ ಇರಬೇಕಾಗಿ ಬಂದದ್ದು ಯಾವ ತಂದೆಗೆ ತಾನೆ ಮೆಚ್ಚಿಕೆ ಯಾದೀತು? ತನ್ನ ಮಗಳೂ ಅವಳ ಗಂಡನೂ ಸಾಮಾನ್ಯ ಮನುಷ್ಯರಲ್ಲ ಎಂಬ ಮಾತು ಅವನಿಗೆ ನೆನಪಿದ್ದಿದ್ದರೆ ಆ ಮಾತು ಬೇರೆ.

ಒಂದು ದಿನ ದಕ್ಷನ ಮನೆಯಲ್ಲಿ ಭಾರೀ ಹಬ್ಬ, ಔತಣವಿತ್ತು. ಸತಿ ಶಿವ ಈ ಇಬ್ಬರನ್ನು ಬಿಟ್ಟು ತನ್ನ ಉಳಿದೆಲ್ಲ ಬಂಧುಬಾಂಧವರನ್ನೂ ದಕ್ಷ ಉತ್ಸವಕ್ಕೆ ಆಮಂತ್ರಿಸಿದ್ದ. ಈ ಉತ್ಸವ ನಡೆಯುವ ವಿಚಾರ ಸತಿಗೆ ನಾರದ ಮಹಾ ಮುನಿಯಿಂದ ತಿಳಿಯಿತು. ಕೇಳಿದ ಕೂಡಲೇ ಸತಿ ತನ್ನ ತಂದೆಯ ಮನೆಗೆ ಹೋಗಲು ನಿಶ್ಚಯಿಸಿದಳು. ಕರೆಯದೆ ಹೋಗಬಹುದೇ ಎಂದು ಶಿವ ಪ್ರಶ್ನಿಸಿದ. ತಂದೆ ಬಂದು ಕರೆಯದಿದ್ದರೆ ಮಗಳಾದವಳು ಹೋಗಲು ಹಿಂದೆ ಮುಂದೆ ನೋಡಬಹುದೇ ಎಂದು ಸತಿ ತರ್ಕ ಹೂಡಿದಳು.

ಆಗ ಸಂಜೆ. ಸಾವಿರಾರು ಎಣ್ಣೆ ದೀಪಗಳಿಂದ ದಕ್ಷನ ಮನೆ ಝಗಝಗಿಸುತ್ತಿತ್ತು. ಲಕ್ಷಗಟ್ಟಲೆ ಹೂವುಗಳಿಂದ ಮನೆಯನ್ನು ಸಿಂಗರಿಸಲಾಗಿತ್ತು. ದೊಡ್ಡ ಹಜಾರದಲ್ಲಿ ನೂರಾರು ಮಂದಿ ಅತಿಥಿಗಳು ಕುಳಿತಿದ್ದರು. ಅಕಸ್ಮಾತ್ತಾಗಿ, ಸಂತೋಷದಿಂದ ಬೀಗುತ್ತಿದ್ದ ಸತಿ ತನ್ನ ತಂದೆಯ ಮುಂದೆ ಬಂದು ನಿಂತಳು. ಆದರೆ ದುರ್ದೈವದಿಂದ ದಕ್ಷನಿಗೆ ಅವಳನ್ನು ನೋಡಿ ಸಂತೋಷವಾಗಲಿಲ್ಲ. ಸತಿಯ ತೀರ ಸರಳವಾದ ಉಡುಪನ್ನು ನೋಡಿ ಅವನಿಗೆ ತುಂಬ ಸಂಕೋಚ

ವಾಯಿತು. ಆತನ ಉಳಿದ ಹೆಣ್ಣು ಮಕ್ಕಳು—ಅವನಿಗೆ ಅನೇಕ ಮಂದಿ ಹೆಣ್ಣು ಮಕ್ಕಳಿದ್ದರು—ಭಾರಿ ಭಾರಿ ಪೀತಾಂಬರ ತೊಟ್ಟು ವಜ್ರವೈಢೂರ್ಯಗಳಿಂದ ಮಿರುಗುತ್ತಿದ್ದರು. ಸತಿ ಹೀಗೆ ಕಾಣಲು ಯಾರು ಹೊಣೆ? ಆ ಹೊಣೆಗೇಡಿ ಮಂಕ ಅಳಿಯನಲ್ಲದೆ ಇನ್ನಾರು ಎಂದು ದಕ್ಷ ಯೋಚಿಸಿದ.

ಸಿಟ್ಟಿನಿಂದ ಹುಚ್ಚನಂತಾಗಿ ದಕ್ಷ ಶಿವನನ್ನು ಬಯ್ಯುತೊಡಗಿದ. ತನ್ನನ್ನೇ ತೆಗಳಿದ್ದರೆ ಸತಿ ಸುಮ್ಮನಿರುತ್ತಿದ್ದಳು. ಆದರೆ ತನ್ನ ಗಂಡನನ್ನು ಕುರಿತು ತನ್ನ ತಂದೆ ಮಾಡಿದ ಟೀಕೆಗಳನ್ನು ಅವಳು ಸಹಿಸದಾದಳು. ಟೀಕೆ ನಿಲ್ಲಿಸಿ ಎಂದು ತಂದೆಯನ್ನು ಬೇಡಿಕೊಂಡಳು. ಆದರೆ ಅವನು ನಿಲ್ಲಿಸಲಿಲ್ಲ. ತಡೆದುಕೊಳ್ಳಲಾರದ ಯಾತನೆಯಿಂದ ಸತಿ ಕೆಳಗೆ ಬಿದ್ದು ಸತ್ತು ಹೋದಳು.

ಈ ದುರಂತದ ಸುದ್ದಿ ಶಿವನಿಗೆ ಮುಟ್ಟಿತು. ಸಾಮಾನ್ಯವಾಗಿ ಶಾಂತನಾಗಿಯೂ ಧ್ಯಾನ ಪರನಾಗಿಯೂ ಇರುತ್ತಿದ್ದ ದೇವರು ಈಗ ಕೋಪೋದ್ರೇಕದಿಂದ ತತ್ತರಿಸತೊಡಗಿದ. ಅವನ ಕೋಪದ ಪ್ರಭಾವದಿಂದ ಅಸಂಖ್ಯ ಅತಿಮಾನವ ಜೀವಿಗಳು ಹುಟ್ಟಿಕೊಂಡರು. ನಾಶ ಮಾಡಲೂ ತೊಡೆದು ಹಾಕಲೂ ಉತ್ಸುಕರಾಗಿ ಅವರು ಚಡಪಡಿಸತೊಡಗಿದರು. ದಕ್ಷನ ಅರಮನೆಗೆ ಅವರೆಲ್ಲ ಧಾವಿಸಿ ಹೋಗಿ ಕಣ್ಣು ಮುಚ್ಚಿ ಕಣ್ಣು ತೆರೆಯುವಷ್ಟರಲ್ಲಿ ಹಬ್ಬದ ಸಂಭ್ರಮದಲ್ಲಿದ್ದ ಅರಮನೆಯನ್ನು ಸುಡುಗಾಡಾಗಿ ಮಾಡಿಬಿಟ್ಟರು.

ಸ್ವಲ್ಪ ಸಮಯದಲ್ಲಿ ಶಿವನೂ ಅಲ್ಲಿಗೆ ಬಂದ. ಒಂದು ಮಾತೂ ಆಡದೆ ತನ್ನ ಹೆಂಡತಿಯ ಹೆಣದ ಹತ್ತಿರ ಕುಳಿತುಕೊಂಡ. ಅನಂತರ ಆ ದೇಹವನ್ನು ತನ್ನ ಹೆಗಲ ಮೇಲಿಟ್ಟುಕೊಂಡು ಗಂಭೀರವಾದ ದುಃಖದಲ್ಲಿ ಮುಳುಗಿ ಸ್ಥಳದಿಂದ ಸ್ಥಳಕ್ಕೆ ಸಂಚರಿಸತೊಡಗಿದ.

ಆದರೆ ಇದನ್ನು ಎಷ್ಟು ಕಾಲ ನಡೆಯಲು ಬಿಡಲು ಸಾಧ್ಯ? ಕೊನೆಗೆ ವಿಷ್ಣು ಅದೃಶ್ಯರೂಪಿಯಾದ ತನ್ನ ಚಕ್ರದ ಮೂಲಕ ಸತಿಯ ಶರೀರವನ್ನು ಸಣ್ಣ ಸಣ್ಣ ತುಣುಕುಗಳಾಗಿ ಕತ್ತರಿಸ ತೊಡಗಿದ. ಆ ದೇಹದ ಕುರುಹು ಕೊಂಚವೂ ಉಳಿಯದಂತೆ ಆದಾಗ ಶಿವ ಪರ್ವತಕ್ಕೆ ಹಿಂತಿರುಗಿ ಬಂದು ಮತ್ತೆ ಧ್ಯಾನದಲ್ಲಿ ತಲ್ಲೀನನಾದ.



# ತಿರುಕ್ಕುರಳ್

ಭಾರತ ದೇಶ ತಾನು ನ್ಯಾಯವಾಗಿ ಹೆಮ್ಮೆ ಪಟ್ಟುಕೊಳ್ಳಬಹುದಾದ ಅದರ ಪರಂಪರೆಯ ಸಂಪತ್ತಿಗೆ ಜಗತ್ತಿನ ಅತ್ಯಂತ ಪುರಾತನ ಭಾಷೆಗಳಲ್ಲೊಂದಾದ ತಮಿಳಿನ ಕೊಡುಗೆ ಎದ್ದು ಕಾಣುವಂಥದು. ಅನೇಕ ಯುಗಗಳ ಕಾಲ ಸಂಸ್ಕೃತವೂ ತಮಿಳೂ ಸಹೋದರಿಯರಂತೆ ಜೊತೆ ಜೊತೆಗೆ ಬದುಕಿ ಬಂದುವು.

ಎರಡು ಸಾವಿರ ವರ್ಷಗಳ ಹಿಂದೆ ತಮಿಳು ದೇಶದ ಋಷಿಯೊಬ್ಬ ಬಹು ದೊಡ್ಡ ಸಂಖ್ಯೆಯಲ್ಲಿ ಸಣ್ಣ ಸಣ್ಣ ಪದ್ಯಗಳನ್ನು ರಚಿಸಿದ. ಈ ಪದ್ಯಗಳು ಒಳಗೊಂಡಿರುವ ಸತ್ಯಕ್ಕೂ ಅವುಗಳ ಅಭಿವ್ಯಕ್ತಿಯ ಶಕ್ತಿಗೂ ಸಮಾನವಾದುದು ಭಾರತ ದೇಶದ ಸಾಹಿತ್ಯದಲ್ಲಿ ಬೇರೆಲ್ಲೂ ಕಾಣೆಸದು. ಈ ಕೃತಿಯ ಹೆಸರು **'ತಿರುಕ್ಕುರಳ್'** ಅಥವಾ **ಕುರಳ್.** 'ತಿರು' ಎಂದರೆ ಪವಿತ್ರವಾದುದು; 'ಕುರಳ್' ಎಂದರೆ ಸಣ್ಣ ಪದ್ಯ–ಖಂಡ. ಈ ಕೃತಿಯಲ್ಲಿ ಪ್ರತಿಯೊಂದರಲ್ಲೂ ಹತ್ತು ಹತ್ತು ದ್ವಿಪದಿಗಳಿರುವ 133 ಅಧ್ಯಾಯಗಳಿವೆ.

ಈ ಪದ್ಯಗಳನ್ನು ರಚಿಸಿದ ಜ್ಞಾನಿಯ ಹೆಸರು ತಿರುವಳ್ಳುವರ್. ಈತನೂ ಕೂಡಾ ಪುರಾತನ ಕಾಲದ ಅನೇಕ ಮಹಾ ಪುರುಷರಂತೆಯೇ ತನ್ನ ಜೀವನದ ಬಗ್ಗೆ ಯಾವ ವಿವರಗಳನ್ನೂ ಬರೆದಿಟ್ಟಿಲ್ಲ. ಆತನ ನಿಜವಾದ ಹೆಸರೂ ನಮಗೆ ತಿಳಿಯದು. 'ತಿರುವಳ್ಳುವರ್' ಎಂಬ ಶಬ್ದದ ಅರ್ಥ 'ವಳ್ಳುವ ಜಾತಿಯ ಭಕ್ತ' ಎಂದು. ವಳ್ಳುವರು ರಾಜನ ಹರಿಕಾರರು. ಆನೆಯ ಮೇಲೆ ಕುಳಿತುಕೊಂಡು ಡೋಲು ಬಾರಿಸುತ್ತ ರಾಜಶಾಸನಗಳನ್ನೂ ತೀರ್ಪುಗಳನ್ನೂ ಸಾರುವುದು ಇವರ ಕೆಲಸ. ತಿರುವಳ್ಳುವರ್ ಬೇರೆ ವೃತ್ತಿಯನ್ನು ಹಿಡಿದಂತೆ ತೋರುತ್ತದೆ. ನೇಯ್ಗೆ ಕೆಲಸವನ್ನು ಮಾಡುತ್ತ ಈಗ ಮದ್ರಾಸ್ ನಗರದ ಒಂದು ಭಾಗವಾಗಿರುವ ಮೈಲಾಪುರದಲ್ಲಿ ಈತ ಜೀವಿಸಿದ್ದ. ಆದರೆ ಅವನು ನೇಯ್ಗೆಯವನಾಗಿದ್ದನೆಂಬುದೂ ಸಂದೇಹವಿಲ್ಲದ ಸಂಗತಿಯಲ್ಲ. ಹಿಂದಿನ ಕಾಲದಲ್ಲಿ ಯಾರೋ ಅವನನ್ನು ನೇಯ್ಗೆಯವನೆಂದು ಆಲಂಕಾರಿಕವಾಗಿ ವರ್ಣಿಸಿದ್ದರೂ ಇರಬಹುದು. ಅಷ್ಟು ಸೊಗಸಾದ ಪದ್ಯಗಳನ್ನು ಆತ ನೇಯುತ್ತಿರಲಿಲ್ಲವೆ?

ಆತನ ಬಗ್ಗೆ ಅನೇಕ ಸೊಗಸಾದ ಕಥೆಗಳಿವೆ. ಬಗೆಹರಿಸಲಾರದ ಸಮಸ್ಯೆಗಳು ತಲೆದೋರಿದಾಗ ಜನ ಈತನ ಸಲಹೆ ಕೇಳಲು ಬರುತ್ತಿದ್ದರು. ಸಾಧ್ಯವಾದಾಗಲೆಲ್ಲ ಈ ಜ್ಞಾನಿ ಕೇವಲ ಮಾತುಗಳಿಗೆ ಬದಲಾಗಿ ದೃಷ್ಟಾಂತ ಕಥೆಗಳ ಮತ್ತು ಉದಾಹರಣೆಗಳ ಮೂಲಕವಾಗಿ ಅವರಿಗೆ ತಕ್ಕ ಉತ್ತರ ಕೊಟ್ಟು ಕಳಿಸುತ್ತಿದ್ದ.

ಒಂದು ದಿನ ಬೆಳಗ್ಗೆ ಒಬ್ಬ ತರುಣ ಒಂದು ಸಮಸ್ಯೆಯನ್ನು ತೆಗೆದುಕೊಂಡು ಆತನ ಮನೆಗೆ ಬಂದು "ಹೆಂಡತಿ ಇರುವುದು ಒಳ್ಳೆಯದೋ, ಇಲ್ಲದೆ ಇರುವುದು ಒಳ್ಳೆಯದೋ, ದಯವಿಟ್ಟು ನನಗೆ ತಿಳಿಸಬೇಕು" ಎಂದು ಕೇಳಿಕೊಂಡ.



ಈ ಪ್ರಶ್ನೆಯನ್ನು ಕೇಳಿ ಆ ಜ್ಞಾನಿ ನಸುನಕ್ಕು ತನ್ನ ಜೊತೆಗೆ ಕೆಲವು ಗಂಟೆಗಳ ಕಾಲ ಇರುವಂತೆ ಆ ತರುಣನಿಗೆ ಹೇಳಿದ. ಅವರು ಬೆಳಗ್ಗಿನ ಊಟಕ್ಕೆ ಕುಳಿತಾಗ ಹಿಂದಿನ ರಾತ್ರಿ ಬೇಯಿಸಿದ್ದರಿಂದ ತಣ್ಣಗಾಗಿದ್ದ ಅನ್ನವನ್ನು ಆತನ ಹೆಂಡತಿ ಅವರಿಗೆ ಬಡಿಸಿದಳು. ಆಗ ಆ ಜ್ಞಾನಿ ಗಟ್ಟಿಯಾಗಿ ಕೂಗಿ ಹೇಳಿದ: "ವಾಸುಕಿ, ಈ ಅನ್ನ ತುಂಬ ಬಿಸಿಯಾಗಿದೆ."

ತುಟಿ ಪಿಟಕ್ ಎನ್ನದೆ ಅವನ ಹೆಂಡತಿ ಅವರ ಹತ್ತಿರ ಕುಳಿತು ಕೊಂಡು ಅನ್ನದ ಬಿಸಿಯಾರುವಂತೆ ಬೀಸಣಿಗೆ ಹಿಡಿದು ಬೀಸತೊಡಗಿದಳು.

ಅನಂತರ ಮಧ್ಯಾಹ್ನದ ಊಟ ಅರ್ಧವಾಗಿರುವಾಗ ಆ ಜ್ಞಾನಿ ಕೂಗಿ ಹೇಳಿದ: "ವಾಸುಕೀ, ಈಗ ರಾತ್ರಿಯಾಗಿದ್ದರೂ ಏಕೆ ನೀನು ಇಲ್ಲಿ ದೀಪ ಹಚ್ಚಿ ಇಟ್ಟಿಲ್ಲ?"

ಒಂದು ಮಾತೂ ಆಡದೆ ವಾಸುಕಿ ದೀಪ ಹಚ್ಚಿ ಆತನ ಹತ್ತಿರ ತಂದಿಟ್ಟಳು.

ತರುಣ ಆಗ, "ಸ್ವಾಮಿ, ನೀವು ನನ್ನ ಪ್ರಶ್ನೆಗೆ ಉತ್ತರ ಕೊಟ್ಟಿದ್ದೀರಿ. ನಿಮ್ಮ ಮನೆಯವರು ನಿಮಗೆ ಯಾವ ರೀತಿಯಲ್ಲಿ ವಿಧೇಯರೂ ನಿಷ್ಠರೂ ಆಗಿದ್ದಾರೋ ಅದೇ ರೀತಿಯವಳಾಗಿರುವ ಪಕ್ಷದಲ್ಲಿ ಹೆಂಡತಿ ಇರುವುದು ಇಲ್ಲದೆ ಇರುವುದಕ್ಕಿಂತ ಮೇಲು" ಎಂದ.

ತಿರುವಳ್ಳುವರ್ ರಾಜನ ಸೇವೆ ಮಾಡಲು ಬಯಸಲಿಲ್ಲ. ಆದರೆ ಅವನ ಅನಂತರ ಬಂದ ತಲೆಮಾರಿನವರು ಅವನು ಜ್ಞಾನಿಗಳ ರಾಜ ಎಂದು ಗುರುತಿಸಿದರು. ಜೀವನದ ಪ್ರತಿಯೊಂದು ಸನ್ನಿವೇಶಕ್ಕೂ ಮನುಷ್ಯನು ಎದುರಿಸಬಹುದಾದ ಪ್ರತಿಯೊಂದು ಪ್ರಸಂಗಕ್ಕೂ ತಕ್ಕ ಉನ್ನತವೂ ವ್ಯಾವಹಾರಿಕವೂ ಆದ ಉಪದೇಶ ಕುರಳ್‌ನಲ್ಲಿ ಇದೆ.

**ತಿರುಕ್ಕುರಳ್**ನಲ್ಲಿ ಇರುವುದು ಜೀವನದ ನೈತಿಕ ಮಟ್ಟಕ್ಕೆ ಮಾತ್ರ ಸಲ್ಲಬಲ್ಲ ಉಪದೇಶಗಳಷ್ಟೇ ಅಲ್ಲ, ರಾಜನೀತಿ, ರಾಜ್ಯಭಾರ ಕ್ರಮ, ಮತ್ತು ಇತರ ಮನುಷ್ಯನ ಚಟುವಟಿಕೆಗಳ ಬಗ್ಗೆಯೂ ಅದರಲ್ಲಿ ಸುಸಂಗತವಾದ ಉಪದೇಶ ಇದೆ.



# ಕಥಾಸರಿತ್ಸಾಗರ

ಕಥೆಯೊಳಗೆ ಕಥೆ, ಒಳಕಥೆಯೊಳಗೆ ಇನ್ನೊಂದು ಕಥೆ—ರಾಕ್ಷಸರು ಚತುರರಾದ ತರುಣರ ಸುಂದರ ತರುಣಿಯರು, ವಿಶ್ವಾಸದ್ರೋಹಿಗಳಾದ ಫಿತೂರಿಗಾರರು, ಮಾತಾಡುವ ಪ್ರಾಣಿಗಳು, ಮಂತ್ರದ ಬಟ್ಟೆಗಳು, ಭೂತವಾಸವಿರುವ ಕೋಟೆಗಳು, ಹಾಗೂ ಧೈರ್ಯ ಸಾಹಸ—ಇವು ಗಳನ್ನು ಕುರಿತು ನೂರುಗಟ್ಟಲೆಯಲ್ಲಿ ಕಥೆಗಳು. ಇದು ಈ ಜಗತ್ತಿನ ಅತ್ಯಂತ ಪುರಾತನ ಕಥಾ ಸಂಗ್ರಹವಾದ **ಕಥಾಸರಿತ್ಸಾಗರ.**

ಈ ಕಥೆಗಳನ್ನು ಬರೆದದ್ದು ಯಾರು, ಯಾವಾಗ? ಈ ಕಥೆಗಳಲ್ಲಿ ಕೆಲವು ಕಥೆಗಳ ಮೂಲ ವನ್ನು ಅತ್ಯಂತ ಪುರಾತನ ಕಾಲದಲ್ಲಿ ಗುರುತಿಸಬಹುದು. ಇವುಗಳನ್ನು ಆಗ ಸಾವಿರಾರು ವರ್ಷ ಗಳ ಹಿಂದೆ ಕೊಂಚ ಬೇರೆ ರೂಪದಲ್ಲಿ ಹೇಳಿರಬಹುದು. ಇಲ್ಲಿನ ಕೆಲವು ಕಥೆಗಳನ್ನು ಕಾಶ್ಮೀರ ಕಣಿವೆಯಲ್ಲಿ ಜೀಲಂ ನದಿಯ ದಡದಲ್ಲಿ ಹಳ್ಳಿಯ ಜನಕ್ಕೆ ಬಿರುಗಾಳಿ ಬೀಸುತ್ತಿದ್ದ ಸಂಜೆಯ ವೇಳೆ ಹೇಳಿದ್ದಿರಬಹುದು. ಉಳಿದವು ದೂರ ದಕ್ಷಿಣದಿಂದ, ಬಹುಶಃ ಕನ್ಯಾಕುಮಾರಿಯಿಂದ ಪ್ರಯಾಣ ಮಾಡಿ ಬಂದಿರಬಹುದು. ಅವು ಅಲ್ಲಿ ತುಂಬ ಕಳೆಯಿದ್ದ ಕಾಲದಲ್ಲಿ ಬೆಸ್ತನೊಬ್ಬ ತನ್ನ ದೋಣಿಯ ನೆರಳಿನಲ್ಲಿ ಒರಗಿಕೊಂಡು ತನ್ನ ಸುತ್ತಲೂ ಕುಳಿತ್ತಿದ್ದ ಹುಡುಗರಿಗೆ ಹೇಳಿದ್ದ ಕಥೆಗಳೂ ಆಗಿರಬಹುದು.

ಈ **ಕಥಾಸರಿತ್ಸಾಗರಕ್ಕೆ** ಭಾರತದ ಎಲ್ಲ ಭಾಗಗಳಿಂದಲೂ ನೂರಾರು ಕಥೆಗಳು ಹರಿದು ಬಂದು ಕೂಡಿಕೊಂಡಿವೆ. ಏಕೆಂದರೆ **ಕಥಾಸರಿತ್ಸಾಗರ** ಎಂದರೆ 'ಕಥೆಗಳ ನದಿಗಳಿಂದ ಆದ ಸಾಗರ' ಎಂದೇ ಅರ್ಥ. ನದಿಗಳು ಬೇರೆ ಬೇರೆ ದಿಕ್ಕುಗಳಿಂದ ಹರಿದು ಬಂದು ಸಮುದ್ರ ವನ್ನು ಸೇರುತ್ತವೆ. ಈ ಕಥೆಗಳನ್ನು ಸಂಗ್ರಹಿಸಿದವನಿಗೆ ಅವು ಅನೇಕ ದಿಕ್ಕುಗಳಿಂದ ಹರಿದು ಬಂದುವು ಎಂಬ ಖಂಡಿತಾಭಿಪ್ರಾಯ ಇದ್ದಿರಬೇಕು.

ಈ ಕಥೆಗಳ ಸಂಗ್ರಾಹಕನಾದ ಸೋಮದೇವ ಕಾಶ್ಮೀರದಲ್ಲಿ ಸುಮಾರು ಸಾವಿರ ವರ್ಷಗಳ ಹಿಂದೆ ಇದ್ದ. ಈ ಕಥೆಗಳಲ್ಲಿ ಹೆಚ್ಚಿನವನ್ನು ಆಯ್ದುಕೊಂಡಿರುವ ಮೂಲಗ್ರಂಥ ಈಗ ಸಿಕ್ಕುವುದಿಲ್ಲ. ಆ ಮೂಲಗ್ರಂಥದ ಹೆಸರು **'ಬೃಹತ್‌ಕಥಾ',** ಅಥವಾ 'ಉದ್ದನೆಯ ಕಥೆ' ಎಂದು ಮಾತ್ರ ನಮಗೆ ತಿಳಿದಿದೆ.

**ಬೃಹತ್ಕಥೆ**ಯನ್ನು ಬರೆದವನು ಗುಣಾಢ್ಯ. ಅವನು ಅದನ್ನು ಬರೆದದ್ದು ಅನೇಕ ವರ್ಷಗಳಿಂದ ಬಳಕೆ ತಪ್ಪಿ ಹೋಗಿದ್ದ ಪೈಶಾಚಿ ಎಂಬ ಭಾಷೆಯಲ್ಲಿ. ಗುಣಾಢ್ಯ ಈ ಕಥೆಗಳನ್ನು ಪದ್ಯರೂಪದಲ್ಲಿ ಬರೆದ ಬಳಿಕ ತನ್ನ ಆಶ್ರಯದಾತನಾದ ಶಾತವಾಹನನಿಗೆ ಓದಿ ಹೇಳಿದನಂತೆ. ಆದರೆ ಶಾತವಾಹನ ಈ ಕಥೆಗಳಲ್ಲಿ ಯಾವ ಆಸಕ್ತಿಯನ್ನೂ ತೋರಲಿಲ್ಲ. ನಿರಾಶೆಯಿಂದಲೂ ಕೋಪದಿಂದಲೂ ಗುಣಾಢ್ಯ ತನ್ನ ಗ್ರಂಥದ ಒಂದೊಂದೇ ಹಾಳೆಯನ್ನು ಹರಿದು ಬೆಂಕಿಗೆಸೆಯುತ್ತ ಬಂದ. ಆದರೆ ಸ್ವಲ್ಪ ಹೊತ್ತಿನಲ್ಲಿಯೇ ಶಾತವಾಹನ ಪಶ್ಚಾತ್ತಾಪಗೊಂಡು ಇಡೀ ಕೃತಿಯೇ ನಾಶವಾಗುವುದನ್ನು ತಡೆದ. ಆದರೆ ಅಷ್ಟರಲ್ಲೇ ಹಸ್ತಪ್ರತಿಯ ಮುಕ್ಕಾಲು ಭಾಗ ಬೆಂಕಿಯಲ್ಲಿ ಸುಟ್ಟು ಬೂದಿಯಾಗಿತ್ತು.

ಆ ಕಥೆಗಳನ್ನು ಸೋಮದೇವ ಸಂಸ್ಕೃತಕ್ಕೆ ಭಾಷಾಂತರಿಸುವ ಮೊದಲೇ ಅವು ಭಾರತದ ಸಮುದ್ರ ತೀರದಾಚೆಗೆ ದೂರ ದೂರ ದೇಶಗಳಿಗೆ ಪ್ರಯಾಣ ಮಾಡಿದ್ದುವು. ಅವುಗಳಲ್ಲಿ ಕೆಲವು ನಾವು ಗುರುತಿಸಲು ಸಾಧ್ಯವಾಗುವ ಮಾರುವೇಷ ತೊಟ್ಟು ಇರುವುದನ್ನು **'ಅರೇಬಿಯನ್ ನೈಟ್ಸ್'** ಕಥೆಗಳಲ್ಲೂ ಕಾಣಬಹುದು.

**ಕಥಾಸರಿತ್ಸಾಗರ**ದ ಕಥೆಗಳು ಯಾವನೋ ಒಬ್ಬನ ಕಲ್ಪನೆಯಿಂದ ಹುಟ್ಟಿದವಲ್ಲ ಎಂಬುದು ಸ್ಪಷ್ಟವಾದ ಸಂಗತಿ. ಯಾರೆಂದು ತಿಳಿಯದ ಅವುಗಳ ಕಥೆಗಾರರು ನಮ್ಮ ದೇಶದ ಎಲ್ಲ ಕಡೆಗಳಿಂದಲೂ ಬಂದವರು. ಬಹುಶಃ ಅವರು ಅಂಥ ವಿದ್ಯಾವಂತರೂ ಆಗಿಲ್ಲದೆ ಇರಬಹುದು. ಆದರೆ ಮನುಷ್ಯ ಸ್ವಭಾವದ ಬಗ್ಗೆ ಅವರಿಗೆ ಆಳವಾದ ಒಳನೋಟ ಇತ್ತು. ಕಪಟಿಗಳನ್ನು ಬಯಲಿಗೆಳೆಯುವಾಗ ಕಥೆಗಾರ ನಿಷ್ಠುರನಾಗಿರುವುದನ್ನೂ ನಿರಪರಾಧಿಗಳ ಕಷ್ಟ ಕೋಟಲೆಗಳನ್ನು ವರ್ಣಿಸುವಾಗ ಸಹಾನುಭೂತಿಯುಳ್ಳವನಾಗಿರುವುದನ್ನೂ ಜಗತ್ತಿನ ರೀತಿಗಳನ್ನು ಬಣ್ಣಿಸುವಾಗ ವಾಸ್ತವ ದೃಷ್ಟಿಯುಳ್ಳವನಾಗಿರುವುದನ್ನೂ ನಾವು ಈ ಕಥೆಗಳಲ್ಲಿ ಕಾಣುತ್ತೇವೆ.

ಕೆಟ್ಟತನಕ್ಕೆ ಶಿಕ್ಷೆಯಾಗಿ ಒಳ್ಳೆಯ ತನಕ್ಕೆ ತಕ್ಕ ಪ್ರತಿಫಲ ದೊರೆಯುವುದನ್ನು ವರ್ಣಿಸುವಾಗ ಕಥೆಗಾರನ ಕೌಶಲ ಸಹಜವಾಗಿಯೇ ಪರಾಕಾಷ್ಠೆಯನ್ನು ಮುಟ್ಟುತ್ತದೆ. ಇಲ್ಲಿ ಅಂಥ ಒಂದು ಕಥೆ ಇದೆ.

ಒಂದಾನೊಂದು ಕಾಲದಲ್ಲಿ ಒಂದು ದೇವಸ್ಥಾನದಲ್ಲಿ ಒಬ್ಬ ಕಪಟ ಸನ್ಯಾಸಿ ಇದ್ದ. ತಾನು ಮೌನ ವ್ರತವನ್ನು ಆಚರಿಸುತ್ತಿದ್ದೇನೆಂದು ಅವನು ನಟಿಸುತ್ತಿದ್ದ. ಅವನಿಗೆ ಗೌರವ ಸಲ್ಲಿಸಲು ಅನೇಕ ಜನರು ಬರುತ್ತಿದ್ದರಲ್ಲದೆ, ಬರುವಾಗ ಪದ್ಧತಿಯಂತೆ ಅವನಿಗೆ ಆಹಾರ, ವಸ್ತ್ರ, ಧನ ಮುಂತಾದ ಬೆಲೆಬಾಳುವ ಕಾಣಿಕೆಗಳನ್ನೂ ತಂದು ಒಪ್ಪಿಸುತ್ತಿದ್ದರು. ಈ ಕಾಣಿಕೆಗಳಲ್ಲಿ ಬಹು ಭಾಗವನ್ನು ತನಗಾಗಿ ಇಟ್ಟುಕೊಂಡು ಆ ಕಪಟ ಸಾಧು ಉಳಿದದ್ದನ್ನು ತನ್ನ ಹತ್ತಿರ ಶಿಷ್ಯರೆಂದು ಹೇಳಿಕೊಳ್ಳುತ್ತ ಅಂಟಿಕೊಂಡಿದ್ದ ಮೂರ್ಖರಿಗೆ ಹಂಚಿಬಿಡುತ್ತಿದ್ದ.

ಒಂದು ದಿನ ಒಬ್ಬ ಶ್ರೀಮಂತ ವರ್ತಕ ತನ್ನ ಹೆಂಡತಿ ಮತ್ತು ಮಗಳನ್ನು ಕರೆದುಕೊಂಡು ಆ ಕಪಟ ಸಾಧುವಿನ ಬಳಿಗೆ ಬಂದ. ಮಗಳು ತುಂಬ ಸುಂದರಿ. ಅವಳು ತನ್ನ ಹೆಂಡತಿಯಾಗ ಬೇಕೆಂದು ಸಾಧುವಿಗೆ ಆಶೆಯಾಯಿತು. ತನಗೆ ಅವಳನ್ನು ಮದುವೆ ಮಾಡಿಕೊಡಿ ಎಂದು ಅವನು ಕೇಳಬಹುದಾಗಿತ್ತು. ಆಗಿನ ಕಾಲದಲ್ಲಿ ಒಬ್ಬ ಶ್ರೀಮಂತ ತನ್ನ ಮಗಳನ್ನು ಒಬ್ಬ ಸಾಧು ವಿಗೆ ಮದುವೆ ಮಾಡಿ ಕೊಡುವುದು ಅಪರೂಪವಾಗಿರಲಿಲ್ಲ. ಆದರೆ ಈ ಸಾಧು ಡೊಂಕು ಬುದ್ಧಿಯವನಾಗಿದ್ದದ್ದರಿಂದ ಒಂದು ಕುತಂತ್ರವನ್ನು ಹೂಡಿದ. ಆ ವರ್ತಕನನ್ನು ಸ್ವಲ್ಪ ದೂರ ಕರೆದು, "ನಾನು ಮೌನ ವ್ರತ ಕೈಕೊಂಡಿರುವುದು ನಿಮಗೆ ಗೊತ್ತಿದೆ. ಆದರೆ ನಿಮ್ಮ ಒಳ್ಳೆಯ ದನ್ನೇ ನಾನು ಬಯಸುವೆನಾಗಿ ನಾನು ಮಾತಾಡಲೇ ಬೇಕಾಗಿದೆ. ಅದು ನಿಮ್ಮ ಮಗಳ ವಿಚಾರ. ಅವಳು ತುಂಬ ದೌರ್ಭಾಗ್ಯವಂತೆ. ಅವಳನ್ನು ನಿಮ್ಮ ಹತ್ತಿರ ಇಟ್ಟುಕೊಂಡರೆ ನಿಮ್ಮ ಭಾಗ್ಯವೂ ನಿಮ್ಮನ್ನು ತೊರೆದು ಹೋಗುವುದು ಖಂಡಿತ ಎಂದು ಹೇಳಿದ.

"ಹಾಗಾದರೆ ನಾನೇನು ಮಾಡಬೇಕು?" ಎಂದು ಆ ವರ್ತಕ ತುಂಬ ಚಿಂತೆಯಿಂದ ಸಾಧು ವನ್ನು ಕೇಳಿದ.

"ಅದು ಬಹಳ ಸುಲಭ" ಎಂದ ಆ ಕಪಟ ಸಾಧು. "ಅವಳನ್ನು ಒಂದು ಪೆಟ್ಟಿಗೆಯಲ್ಲಿಟ್ಟು ಅದನ್ನು ಈ ರಾತ್ರಿ ನದಿಯಲ್ಲಿ ತೇಲಿಬಿಡಿ. ಅಲ್ಲದೆ ಪೆಟ್ಟಿಗೆಯ ಮೇಲೆ ಒಂದು ದೀಪವನ್ನೂ ಇಟ್ಟಿರಬೇಕು."

"ಸರಿ" ಎಂದ ಆ ವರ್ತಕ.

ರಾತ್ರಿಯ ಮೊದಲನೆಯ ಭಾಗದಲ್ಲಿ ಒಬ್ಬ ರಾಜಕುಮಾರ ಬೇಟೆಯನ್ನು ಮುಗಿಸಿ ಹಿಂತಿರುಗಿ ಬರುತ್ತ ಆ ನದಿಯನ್ನು ದಾಟುತ್ತಿದ್ದ. ಥಕ್ಕನೆ ತನ್ನ ಮೇಲೆ ದೀಪವನ್ನು ಹೊತ್ತು ಕೊಂಡು ತೇಲಿ ಬರುತ್ತಿದ್ದ ಪೆಟ್ಟಿಗೆ ಅವನ ಗಮನವನ್ನು ಸೆಳೆಯಿತು. ಅದನ್ನು ತನ್ನ ದೋಣಿ ಯೊಳಕ್ಕೆ ತಂದು ಅದರ ಬಾಯಿ ತರೆದಾಗ ಒಳಗೆ ಒಬ್ಬ ಸುಂದರಿಯಾದ ಕನ್ಯೆ ಅಳುತ್ತಿರು

ವುದನ್ನು ಕಂಡು ಅವನಿಗೆ ಪರಮಾಶ್ಚರ್ಯವಾಯಿತು.

ಆ ದಿನ ಕಾಡಿನಲ್ಲಿ ಹಿಡಿದಿದ್ದ ಭಯಂಕರವಾದೊಂದು ಕೋತಿ ರಾಜಕುಮಾರನ ಹತ್ತಿರ ಇತ್ತು. ಅವನು ಆ ಕೋತಿಯನ್ನು ಪೆಟ್ಟಿಗೆಯೊಳಗಿಟ್ಟು ಬಾಗಿಲು ಹಾಕಿ ದೀಪವನ್ನೂ ಅದರ ಸ್ಥಾನದಲ್ಲೇ ಇಟ್ಟು ನದಿಯ ಮೇಲೆ ತೇಲಿಬಿಟ್ಟ.

ದೇವಾಲಯದ ಹತ್ತಿರವಿದ್ದ ನದೀತೀರದಲ್ಲಿ ಆ ಸಾಧು ದೀಪ ಹೊತ್ತ ಪೆಟ್ಟಿಗೆಗಾಗಿ ಆತುರದಿಂದ ಕಾಯುತ್ತ ಇದ್ದ. ಅದು ಕಣ್ಣಿಗೆ ಬಿದ್ದ ಕೂಡಲೇ ಈಜಿ ಹೋಗಿ ಅದನ್ನು ತೆಗೆದು ಕೊಂಡು ಬನ್ನಿ ಎಂದು ತನ್ನ ಶಿಷ್ಯರಿಗೆ ಸಾಧು ಅಪ್ಪಣೆ ಕೊಟ್ಟ. ಪೆಟ್ಟಿಗೆಯನ್ನು ಅವನ ಕೊಠಡಿ ಯೊಳಕ್ಕೆ ತಂದರು. ಸಾಧು ತುಂಬ ಆಶೆಯಿಂದಲೂ ಉದ್ವೇಗದಿಂದಲೂ ಆ ಪೆಟ್ಟಿಗೆಯನ್ನು ತೆರೆದ.



ಏನು ನಡೆಯುತ್ತಿದೆ ಎಂದು ಅವನಿಗೆ ಅರಿವಾಗುವ ಮೊದಲೇ ಅವನ ಮೂಗಿನ ದೊಡ್ಡ ದೊಂದು ತುಂಡು ಮಾಯವಾಗಿತ್ತು. ಅನಂತರ ಮಾಯವಾದದ್ದು ಅವನ ಕಿವಿ.

ಹುಚ್ಚು ಹಿಡಿದವನಂತೆ ಕಿರುಚುತ್ತ ಆ ಸಾಧು ಅಲ್ಲಿಂದ ಕಾಲಿಗೆ ಬುದ್ಧಿ ಹೇಳಿ ಓಡತೊಡಗಿದ. ಅನಂತರ ಅವನು ಯಾರ ಕಣ್ಣಿಗೂ ಬೀಳಲಿಲ್ಲ. ಅಂಥ ಸುಂದರ ಹುಡುಗಿ ಅಷ್ಟು ಭಯಂಕರವಾದ ಕಪಿಯಾಗಿ ಮಾರ್ಪಾಟುಗೊಂಡದ್ದು ಹೇಗೆ ಎಂದು ಅವನು ಆಶ್ಚರ್ಯಪಡುತ್ತಲೇ ಇದ್ದಿರಬೇಕು.



ಕಾಲ ಕ್ರಮದಲ್ಲಿ ಆ ರಾಜಕುಮಾರ ಈ ಕನ್ಯೆಯನ್ನು ಮದುವೆ ಮಾಡಿಕೊಂಡನೆಂದೂ ಇಬ್ಬರೂ ಅನಂತರ ಸುಖವಾಗಿ ಬಾಳಿದರೆಂದೂ ಹೇಳುವ ಅಗತ್ಯವಿಲ್ಲ.



# ಪಂಚತಂತ್ರ

ಪುರಾತನ ಕಾಲದಲ್ಲಿ ಒಬ್ಬ ರಾಜನಿಗೆ ಮೂರು ಮಂದಿ ಗಂಡು ಮಕ್ಕಳಿದ್ದರು. ರಾಜ ಕುಮಾರರು ತಮ್ಮ ವಿದ್ಯಾಭ್ಯಾಸದ ಕಡೆಗೆ ಕೊಂಚವೂ ಲಕ್ಷ್ಯ ಕೊಡದೆ ಸೋಮಾರಿಗಳಾಗಿ ಕಾಲ ಕಳೆಯುತ್ತಿದ್ದರು. ಇದರಿಂದ ರಾಜನಿಗೆ ತುಂಬ ದುಃಖವಾಯಿತು. ಅವರು ಅದೇ ರೀತಿ ಸಮಯವನ್ನು ವ್ಯರ್ಥ ಮಾಡಿದರೆ ಪಟ್ಟಕ್ಕೆ ಬರಲು ಅವರಲ್ಲಿ ಒಬ್ಬನೂ ಅರ್ಹನಾಗುವುದಿಲ್ಲ ಎಂದು ರಾಜನಿಗೆ ಗೊತ್ತು.

ಅನೇಕ ಅಧ್ಯಾಪಕರನ್ನು ರಾಜ ನೇಮಿಸಿಕೊಂಡ. ಆದರೆ ಎಲ್ಲವೂ ವ್ಯರ್ಥ. ಅಧ್ಯಾಪಕನೊಬ್ಬ ಕಣ್ಣಿಗೆ ಬಿದ್ದರೆ ಸಾಕು, ರಾಜಕುಮಾರರು ಭಯದಿಂದ ತತ್ತರಿಸಿ ಕಾಲಿಗೆ ಬುದ್ಧಿ ಹೇಳುತ್ತಿದ್ದರು.

ಕಾಲ ಕಳೆಯುತ್ತ ಬಂತು; ರಾಜನ ನಿರಾಶೆಯೂ ಹೆಚ್ಚುತ್ತಾ ಹೋಯಿತು.

ಕೊನೆಗೆ ರಾಜ ತನ್ನ ದೇಶದ ಎಲ್ಲ ವಿದ್ವಾಂಸರನ್ನೂ ಕರೆಸಿ ಒಂದು ಸಭೆ ಏರ್ಪಡಿಸಿ ಅವರಿಗೆ ತನ್ನ ಸಮಸ್ಯೆಯನ್ನು ವಿವರವಾಗಿ ಹೇಳಿದ. "ನಿಮ್ಮಲ್ಲಿ ಯಾರಾದರೂ ನನಗೆ ಸಹಾಯ ಮಾಡ ಬಲ್ಲಿರಾ?" ಎಂದು ಪ್ರಶ್ನಿಸಿದ.

ಬಹಳ ಹೊತ್ತಿನ ವರೆಗೆ ಯಾರೂ ಉತ್ತರ ಕೊಡಲಿಲ್ಲ. ಕೊನೆಗೆ ಅವರಲ್ಲೊಬ್ಬ ಎದ್ದು ನಿಂತು, "ಮಹಾರಾಜರೇ, ತಾವು ತಮ್ಮ ಮಕ್ಕಳ ವಿದ್ಯಾಭ್ಯಾಸವನ್ನು ನನ್ನ ಕೈಗೆ ಒಪ್ಪಿಸಿದರೆ ಕೈಲಾದದ್ದನ್ನು ಮಾಡುತ್ತೇನೆ" ಎಂದ.

ಈ ವಿದ್ವಾಂಸನೇ ವಿಷ್ಣುಶರ್ಮ. ತನ್ನ ಜ್ಞಾನದಿಂದ ಆತ ಇಡೀ ದೇಶದಲ್ಲಿ ಸುಪ್ರಸಿದ್ಧ ನಾಗಿದ್ದ. ಅಂಥ ಮನುಷ್ಯ ತನ್ನ ಮಕ್ಕಳಿಗೆ ಪಾಠ ಹೇಳಲು ಮುಂದೆ ಬಂದನೆಂದು ರಾಜನಿಗೆ ತುಂಬ ಸಂತೋಷವಾಯಿತು.

ರಾಜನ ಅರಮನೆ ಬಹಳ ದೊಡ್ಡದು. ಅದರ ಸುತ್ತ ಎತ್ತರವಾದ ಮರಗಳಿದ್ದುವು. ಉದ್ದವಾಗಿಯೂ ತುಂಬ ಅಗಲವಾಗಿಯೂ ಇದ್ದ ಮೇಲ್ಛಾವಣಿಯ ಕೆಲವು ಭಾಗಗಳ ಮೇಲೆ

ಈ ಮರಗಳು ನೆಳಲು ಚೆಲ್ಲುತ್ತಿದ್ದವು. ವಿಷ್ಣುಶರ್ಮ ಛಾವಣಿಯ ಮೇಲಿನ ಒಂದು ಏಕಾಂತವಾದ ಮೂಲೆಗೆ ರಾಜಕುಮಾರರನ್ನು ಕರೆದುಕೊಂಡು ಹೋದ. ಅಲ್ಲಿ ತನ್ನ ಮುಂದೆ ರಾಜಕುಮಾರರನ್ನು ಕುಳ್ಳಿರಿಸಿಕೊಂಡು ತಾನೂ ಕುಳಿತ.

ವಿದ್ಯಾಭ್ಯಾಸವನ್ನು ದ್ವೇಷಿಸುತ್ತಿದ್ದ ಆ ರಾಜಕುಮಾರರಿಗೆ ಮೊದಮೊದಲು ಇದರಿಂದೇನೂ ಸಂತೋಷವಾಗಲಿಲ್ಲ. ಆದರೆ ಸ್ವಲ್ಪ ಹೊತ್ತಿನಲ್ಲಿಯೇ ಆ ಸ್ಥಳವನ್ನು ಬಿಟ್ಟು ಏಳಲೂ ಅವರಿಗೆ ಬೇಡವೆನ್ನಿಸಿತು. ವಿಷ್ಣುಶರ್ಮನ ವಿದ್ಯಾಭ್ಯಾಸದ ರೀತಿ ಅಪೂರ್ವ. ಅವನು ಹೀಗೆ ಆರಂಭಿಸಿದ: "ಗೋದಾವರೀ ನದೀ ತೀರದಲ್ಲಿ ದೊಡ್ಡದೊಂದು ಮರ. ಬೇರೆ ಬೇರೆ ದಿಕ್ಕುಗಳಿಂದ ಬರುತ್ತಿದ್ದ ಪಕ್ಷಿಗಳೆಲ್ಲ ರಾತ್ರಿ ಹೊತ್ತು ಆ ಮರದಲ್ಲಿ ಆಶ್ರಯ ಪಡೆಯುತ್ತಿದ್ದುವು........."

ಹೀಗೆ ಅವನು ಕಥೆಗಳನ್ನು ಹೇಳುತ್ತ ಹೋದ. ಅವೆಲ್ಲ ಮೃಗಪಕ್ಷಿಗಳನ್ನು ಕುರಿತ ಕಥೆಗಳು. ಆದರೆ ನಿಜವಾಗಿ ಅವು ನಮ್ಮ ಬಗ್ಗೆಯೇ ಇರುವಂಥವು; ಮನುಷ್ಯನ ಬೇರೆ ಬೇರೆ ಸಮಸ್ಯೆಗಳನ್ನೂ ಅವುಗಳ ಪರಿಹಾರಗಳನ್ನೂ ಕುರಿತ ಕಥನಗಳು.

ಆದರ್ಶ ಸ್ನೇಹಿತ ಯಾರು? ಗೆಳೆತನವನ್ನು ಉಳಿಸಿಕೊಂಡು ಬರುವುದು ಹೇಗೆ? ನಮಗೆ ವಿನಾಶ ತರಬಲ್ಲ ಆಶೆಗಳಿಂದ ತಪ್ಪಿಸಿಕೊಳ್ಳುವುದು ಹೇಗೆ? ಒಳ್ಳೆಯವನಾಗಿದ್ದೂ ಜಾಗರೂಕ



ನಾಗಿರುವುದರಿಂದ, ಉದಾತ್ತನಾಗಿದ್ದೂ ಚತುರನಾಗಿರುವುದರಿಂದ ಲಾಭವಿದೆ; ಎಂಬುದನ್ನು ಈ ಕಥೆಗಳು ತೋರಿಸಿಕೊಡುತ್ತವೆ.

ವಿಷ್ಣುಶರ್ಮನ ಜೊತೆಗೆ ಕುಳಿತದ್ದರಿಂದ ಹುಡುಗರು ತಿಳಿವಳಿಕೆಯನ್ನೂ ವ್ಯವಹಾರ ಜ್ಞಾನವನ್ನೂ ಪಡೆದರು.

**ಪಂಚತಂತ್ರ**ದ ಕಥೆಗಳನ್ನು ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ರೂಪಗಳಲ್ಲಿ ಮತ್ತೆ ಮತ್ತೆ ಹೇಳಲಾಗಿದೆ. ನೀವು ಕೂಡಾ ಈ ಕಥೆಗಳಲ್ಲಿ ಬೇಕಾದಷ್ಟು ಕಥೆಗಳನ್ನು ಓದಿರಬೇಕು. ಆದರೆ ಕೆಲವು ಕಥೆಗಳು ಅಷ್ಟು ಜನಪ್ರಿಯವಾಗಿಲ್ಲದೆ ಇದ್ದರೂ ಕಥಾಲೇಖದಲ್ಲಿ ಅವು ರತ್ನಗಳಂತೆ ಇವೆ. ಉದಾಹರಣೆಗೆ 'ಮಾತಾಡುವ ಗುಹೆ' ಎಂಬ ಕಥೆಯನ್ನು ತೆಗೆದುಕೊಳ್ಳಬಹುದು. ಇದು ತುಂಬ ರಸಭರಿತವಾದ ಕಥೆಯಾಗಿರುವುದು ಮಾತ್ರವಲ್ಲದೆ ಪ್ರತಿಯೊಬ್ಬನೂ ಯಾವಾಗಲೂ ತನ್ನ ಬಗ್ಗೆ ಎಚ್ಚರಿಕೆಯಿಂದಿದ್ದು ಆತ್ಮ ರಕ್ಷಣೆಗೆ ಸಿದ್ಧನಾಗಿರಬೇಕೆಂಬ ಪಾಠವನ್ನು ಕಲಿಸುತ್ತದೆ.



ಒಂದಾನೊಂದು ಕಾಲದಲ್ಲಿ ಒಂದು ಕಾಡಿನಲ್ಲಿ ಒಂದು ನರಿ ಇತ್ತು. ನಿರ್ಜನವಾದ ಪ್ರದೇಶದಲ್ಲಿದ್ದ ಗುಹೆಯೊಂದರಲ್ಲಿ ಅದರ ವಾಸ. ಒಂದು ದಿನ ನರಿ ಅಲ್ಲಿ ಇಲ್ಲದೆ ಇದ್ದಾಗ ಹಸಿವೆಯಿಂದ ಕಂಗಾಲಾಗಿದ್ದ ಸಿಂಹವೊಂದು ಅಲ್ಲಿಗೆ ಬಂತು. ಗುಹೆಯನ್ನು ಹೊಕ್ಕು ಆ ಸಿಂಹ ಸುತ್ತಲೂ ಮೂಸಿ ನೋಡಿತು. ಅದು ನರಿಯ ವಾಸಸ್ಥಳ ಎಂಬುದರಲ್ಲಿ ಸಂದೇಹವಿಲ್ಲ ಎಂದು ಸಿಂಹ ಭಾವಿಸಿತು. ಆಹಾರ ಹುಡುಕಿಕೊಂಡು ನಾನು ಅಲೆಯುವುದು ಏಕೆ? ಇಲ್ಲಿ ಕೆಲಂಚ ಒರಗಿಕೊಂಡು ವಿಶ್ರಾಂತಿ ತೆಗೆದುಕೊಳ್ಳುತ್ತೇನೆ. ನರಿ ಹಿಂತಿರುಗಿ ಬಂದಾಗ ನನಗೆ ಸವಿಯೂಟ ಸಿಕ್ಕದೇ?

ಮುಸ್ಸಂಜೆಯ ಹೊತ್ತಿಗೆ ನರಿ ಮನೆಗೆ ಮರಳಿ ಬಂತು. ಗುಹೆಯನ್ನು ಪ್ರವೇಶಿಸಬೇಕು ಎನ್ನುವಾಗ ಅದಕ್ಕೆ ಸಿಂಹದ ಅಸ್ಪಷ್ಟ ಹೆಜ್ಜೆಯ ಗುರುತುಗಳು ಕಂಡುವು. ಅದರ ಹೃದಯ ಜೋರಾಗಿ ಬಡಿದುಕೊಳ್ಳ ತೊಡಗಿತು. ಅನಂತರ ಅದು ಧೈರ್ಯ ತಂದುಕೊಂಡು ಗಟ್ಟಿಯಾಗಿ ಕೂಗಿ ಹೇಳಿತು: "ಎಲೆ ಮಾತಾಡುವ ಗುಹೆಯೇ. ನಿನಗೇನಾಗಿದೆ? ಸಾಮಾನ್ಯವಾಗಿ ನಾನು ಮನೆಗೆ ಬಂದಾಗಲೆಲ್ಲ ನೀನು ನನ್ನನ್ನು ಕುರಿತು 'ನರಿಯೇ ದಯಮಾಡಿಸಬೇಕು' ಎಂದು ಹೇಳಿ ನನ್ನನ್ನು ಬರಮಾಡಿಕೊಳ್ಳುತ್ತಿದ್ದೆ. ಆದರೆ ಈ ದಿನ ನೀನು ಮೌನ. ನಾನು ಒಳಕ್ಕೆ ಬರಬಾರದು ಎಂದು ನಿನ್ನ ಇಷ್ಟ ಎಂದು ನಾನು ನಂಬಲೇ?"

ಸಿಂಹ ತನ್ನಷ್ಟಕ್ಕೆ ಹೀಗೆ ಯೋಚಿಸಿತು: "ನಾನು ಇಲ್ಲಿ ಇರುವುದರಿಂದ ಈ ಗುಹೆಗೆ ಹೆದರಿಕೆಯಾಗಿದೆ ಎನ್ನುವುದರಲ್ಲಿ ಸಂದೇಹವಿಲ್ಲ. ಆ ಕಾರಣದಿಂದಲೇ ಅದು ನರಿಯನ್ನು ಸ್ವಾಗತಿಸುತ್ತಿಲ್ಲ."

ಹೀಗೆಂದು ಸಿಂಹ ಜೋರಾಗಿ ಗರ್ಜಿಸಿ ಹೇಳಿತು: "ನರಿರಾಯರೇ, ಬರಬೇಕು, ಬರ ಬೇಕು."

ತನ್ನ ಜೀವ ಉಳಿಸಿಕೊಳ್ಳುವುದಕ್ಕಾಗಿ ಪಲಾಯನ ಮಾಡುತ್ತ ನರಿ ಊಳಿ ಹೇಳಿತು: "ಪ್ರಿಯ ಗುಹೆಯೇ, ನಿನ್ನನ್ನು ತ್ಯಜಿಸಿ ಹೋಗಲು ನಾನು ನಿಶ್ಚಯಿಸಿದ್ದೇನೆ."

ತನ್ನಷ್ಟಕ್ಕೆ ತಾನು ಒಳಗೊಳಗೇ ನಗುತ್ತ ನರಿ ಹೀಗೆ ಅಂದುಕೊಂಡಿತು: ಮಾತಾಡುವ ಗುಹೆ ಅಲ್ಲವಾ? ಇಂಥ ಸಂಗತಿಯನ್ನು ಕೇಳೇ ಇಲ್ಲ. ದೇವರ ದಯೆ ಬಚಾವಾದೆ!



# ಜಾತಕಗಳು

ಈ ದಿವಸ ಬಹಳ ಹೆಚ್ಚು ಜನ ಅನುಸರಿಸುತ್ತಿರುವ ಧರ್ಮಗಳಲ್ಲಿ ಬೌದ್ಧಧರ್ಮ ಒಂದು. ಭಾರತವಲ್ಲಿ ಬೌದ್ಧರು ಹೆಚ್ಚಾಗಿಲ್ಲವಾದರೂ ಪ್ರತಿಯೊಬ್ಬ ಭಾರತೀಯನಿಗೂ ಬುದ್ಧನ ಜೀವನದ ಕೆಲವು ಅಂಶಗಳಾದರೂ ತಿಳಿದಿವೆ. ಆತ ರಾಜಕುಮಾರನಾಗಿ ಹುಟ್ಟಿ ಗೌತಮನೆಂಬ ಹೆಸರುಳ್ಳವನು. ದುಃಖವನ್ನು ಗೆಲ್ಲುವ ಮಾರ್ಗವನ್ನು ಕಂಡುಹಿಡಿಯುವುದಕ್ಕಾಗಿ ಆತ ತನ್ನ ಕುಟುಂಬವನ್ನೂ ಐಶ್ವರ್ಯವನ್ನೂ ಅಧಿಕಾರವನ್ನೂ ತ್ಯಜಿಸಿ ಕಾಡಿಗೆ ಹೋದ. ಆದರೆ ಬೌದ್ಧ ಪುರಾಣಗಳಿಗನುಸಾರವಾಗಿ ಆತ ಗೌತಮನಾಗಿ ಹುಟ್ಟುವ ಮೊದಲೇ ನೂರಾರು ಸಲ ಮಾನವನ ಮತ್ತು ಪ್ರಾಣಿಗಳ ನಾನಾ ರೂಪದಲ್ಲಿ ಮತ್ತೆ ಮತ್ತೆ ಹುಟ್ಟುತ್ತ ಬಂದವನು. ಪ್ರತಿ ಜನ್ಮದಲ್ಲೂ ಆತ ಅಮೂಲ್ಯವಾದ ಅನುಭವಗಳನ್ನು ಪಡೆದುಕೊಂಡಿದ್ದ. ಕೊನೆಗೆ ಆತ ಬುದ್ಧನಾಗಿ ಆ ಜನ್ಮಾಂತರದ ಅನುಭವಗಳನ್ನೆಲ್ಲ ತನ್ನ ಶಿಷ್ಯರಿಗೆ ಹೇಳಿದ.

ಆ ಕಥೆಗಳನ್ನು **ಜಾತಕ** ಕಥೆಗಳೆಂದು ಹೇಳುತ್ತಾರೆ. ಈ ಕಥೆಗಳಲ್ಲಿ ಎಷ್ಟನ್ನು ಬುದ್ಧನೇ ಸ್ವತಃ ತನ್ನ ಶಿಷ್ಯರಿಗೆ ಹೇಳಿದ. ಎಷ್ಟನ್ನು ಆತನ ಉತ್ಸಾಹಿ ಶಿಷ್ಯರು ಅನಂತರ ಸೇರಿಸಿದರು ಎಂಬುವನ್ನು ತಿಳಿಯುವುದು ಕಷ್ಟ.

ಒಟ್ಟು **457 ಜಾತಕ** ಗಳಿವೆ. ಸ್ಥೂಲವಾಗಿ 'ಜಾತಕ' ಎಂದರೆ 'ಹುಟ್ಟು' ಎಂದು ಅರ್ಥ. ಪ್ರತಿ ಜಾತಕದಲ್ಲೂ ಒಂದು ಅಥವಾ ಅದಕ್ಕಿಂತ ಹೆಚ್ಚು ಕಥೆಗಳಿರುತ್ತವೆ.

ಪ್ರತಿ ಕಥೆಯಲ್ಲೂ ಒಂದು ನೀತಿ ಇದೆ. ಪ್ರತಿಯೊಂದು ಕಥೆಯೂ ನಮಗೆ ಜೀವನವನ್ನು ಇನ್ನೂ ಚೆನ್ನಾಗಿ ತಿಳಿಯಲೂ ನಾವು ಇನ್ನೂ ಚೆನ್ನಾಗಿ ಬದುಕಲೂ ಸಹಾಯ ಮಾಡುತ್ತದೆ. ಮಾನವನ ದುಃಖಕ್ಕೆ ಮುಖ್ಯ ಕಾರಣಗಳಾದ ಅಹಂಕಾರ, ಲೋಭ ಮುಂತಾದ ದುರ್ಗುಣಗಳು ವ್ಯರ್ಥ ಎಂಬುದನ್ನು ಅವು ಒತ್ತಿ ಹೇಳುತ್ತವೆ.

ಅಹಂಕಾರಿಯಾದ ಸಾಧುವಿನ ವೃತ್ತಾಂತವನ್ನೇ ತೆಗೆದುಕೊಳ್ಳೋಣ. ಅವನ ಕಾವಿಬಟ್ಟೆಯನ್ನೂ ನೀಳವಾದ ಗಡ್ಡವನ್ನೂ ಕಂಡು ಜನ ಅವನಿಗೆ ಬಾಗಿ ನಮಸ್ಕರಿಸುತ್ತಿದ್ದರು. ಇದರಿಂದ ಅವನಿಗೆ ತುಂಬ ಜಂಭ. ಅಂಥ ಭಕ್ತಿಗೆ ಪಾತ್ರನಾಗುವುದು ತನ್ನ ಹಕ್ಕು ಎಂದು ಅವನ ಭಾವನೆ!

ಒಂದು ದಿನ ಆ ಸಾಧು ಒಂದು ಹಳ್ಳಿಯ ಮೂಲಕ ಹೋಗುತ್ತಿದ್ದ. ಅಲ್ಲಿ ಎರಡು ಟಗರುಗಳ ನಡುವೆ ನಡೆಯಲಿದ್ದ ಕಾಳಗವನ್ನು ನೋಡಲು ಜನ ಗುಂಪು ಸೇರಿದ್ದರು. ಆ ಸಾಧು ಅಲ್ಲಿ ಒಂದು ಕಲ್ಲು ಹಾಸಿನ ಮೇಲೆ ಕುಳಿತು ಜನರ ಗಮನವನ್ನು ಸೆಳೆಯಲು ಪ್ರಯತ್ನಿಸುತ್ತ ಗಂಟಲು ಸರಿ ಮಾಡಿಕೊಂಡು ಒಂದು ಸಲ ಕೆಮ್ಮಿದ.

ದುರ್ದೈವದಿಂದ ಜನರ ಗುಂಪು ಅವನನ್ನು ಗಮನಿಸುವ ಮೊದಲೇ ಆ ಟಗರುಗಳ ಲ್ಲೊಂದರ ಕಣ್ಣು ಅವನ ಮೇಲೆ ಬಿತ್ತು. ಏಕೋ ಏನೋ ಆ ಪ್ರಾಣಿಗೆ ಅವನ ಮುಖ ಹಿಡಿಸ ಲಿಲ್ಲ, ಅವನ ಮೇಲ್ಬೀಳಲು ನಿರ್ಧರಿಸಿತು.

ಆಕ್ರಮಣ ನಡೆಸುವ ಮೊದಲು ತಲೆಯನ್ನು ಬಗ್ಗಿಸುವುದು ಟಗರಿನ ಅಭ್ಯಾಸ. ಅದು ತಲೆ ಬಗ್ಗಿಸಿದ್ದನ್ನು ಕಂಡ ಆ ಸಾಧು ಅದು ತನ್ನಲ್ಲಿ ಪೂಜ್ಯ ಭಾವನೆಯಿಂದ ಹಾಗೆ ಮಾಡುತ್ತಿದೆ ಎಂದು ಭಾವಿಸಿ ತುಂಬ ಹಿಗ್ಗಿದ. ಕುಳಿತಲ್ಲಿಂದ ಸರಿಯಿರಿ ಎಂದು ಜನ ಕೂಗಿ ಹೇಳಿದ್ದೂ ಅವನ ಕಿವಿಗೆ ಬೀಳಲಿಲ್ಲ. ಅದಕ್ಕೆ ಬದಲಾಗಿ ಟಗರನ್ನು ಆಶೀರ್ವದಿಸಲು ತನ್ನ ಕೈಯನ್ನು ಮೇಲಕ್ಕೆತ್ತಿದ. ಮರುಕ್ಷಣವೇ ಆ ಟಗರು ಧಾಳಿ ನಡೆಸಿ ಅವನನ್ನು ನೆಲಕ್ಕೆ ಕೆಡವಿತು.

ಈ ಕೆಳಗಿನ ಇನ್ನೊಂದು ಕಥೆಯಲ್ಲಿ ಕಾಣುವಂತೆ ಲೋಭ ಅಥವಾ ಅತ್ಯಾಶೆಯ ಪರಿಣಾಮ ಗಳು ಇನ್ನೂ ಕೆಟ್ಟದ್ದಾಗಬಹುದು.

ಒಬ್ಬ ಅಲೆಮಾರಿ ತರುಣ ಒಂದು ದಿನ ಪವಾಡ ನಡೆಸುವ ಶಕ್ತಿಯಿದ್ದ ಒಬ್ಬ ಹಳ್ಳಿಯ ಅವಿದ್ಯಾವಂತನನ್ನು ಕಂಡ. ಆ ಮನುಷ್ಯ ಪ್ರತಿನಿತ್ಯವೂ ಕಾಡಿಗೆ ಹೋಗಿ ಒಂದು ಮಾವಿನ ಮರದ ಕೆಳಗೆ ನಿಂತು ಒಂದು ಮಂತ್ರವನ್ನು ಹೇಳುತ್ತಿದ್ದ. ತತ್‌ಕ್ಷಣವೇ ಆ ಮರ ಕಾಯಿಗಳ ಭಾರದಿಂದ ಬಗ್ಗುತ್ತಿತ್ತು. ಮರುನಿಮಿಷವೇ ಆ ಕಾಯಿಗಳೆಲ್ಲ ಹಣ್ಣಾಗಿ ನೆಲಕ್ಕೆ ಬೀಳುತ್ತಿದ್ದುವು. ಆತ ಅವುಗಳನ್ನು ಆರಿಸಿಕೊಂಡು ಕೆಲವನ್ನು ತಾನು ತಿಂದು ಉಳಿದುವನ್ನು ಬಡವರಾದ ತನ್ನ ಅಕ್ಕಪಕ್ಕದವರಿಗೆ ಹಂಚಿಬಿಡುತ್ತಿದ್ದ.

ಆ ತರುಣ ಆ ಹಳ್ಳಿಯವನು ಕೆಳ ಜಾತಿಯವನಾಗಿದ್ದರೂ ಅವನ ಕಾಲಿಗೆ ಬಿದ್ದು ತನಗೆ ಆ ಮಂತ್ರವನ್ನು ಕಲಿಸಿಕೊಡಬೇಕೆಂದು ಅಂಗಲಾಚಿದ. ಆ ಮನುಷ್ಯ ಇಷ್ಟವಿಲ್ಲದೆ ಇದ್ದರೂ ಮಂತ್ರ ಹೇಳಿಕೊಡಲು ಸಮ್ಮತಿಸಿದ. ಆದರೆ ಈ ಎಚ್ಚರಿಕೆ ಕೊಟ್ಟ: "ಈ ಮಂತ್ರಶಕ್ತಿಯನ್ನು ನೀನು ನಿನ್ನ ಅತ್ಯಾಸೆ ತೀರಿಸಿಕೊಳ್ಳಲು ಬಳಸಬಾರದು. ಅದೂ ಅಲ್ಲದೆ, ನೀನು ಎಲ್ಲಿಯ ವರೆಗೆ ಸುಳ್ಳು ಹೇಳುವುದಿಲ್ಲವೋ ಅಲ್ಲಿಯ ವರೆಗೆ ಮಾತ್ರ ಈ ಮಂತ್ರಶಕ್ತಿ ಕೆಲಸ ಮಾಡುವುದು."

ತನ್ನ ಹಳ್ಳಿಗೆ ಮರಳಿ ಬಂದ ಕೂಡಲೇ ಆ ತರುಣ ಆ ಮಂತ್ರವನ್ನು ಪ್ರತಿನಿತ್ಯವೂ ಅನೇಕ ಸಲ ಪ್ರಯೋಗ ಮಾಡುತ್ತ ಸವಿಸವಿಯಾದ ಮಾವಿನ ಹಣ್ಣುಗಳನ್ನು ತುಂಬಾ ಪಡೆಯ ತೊಡಗಿದ. ಹಣ್ಣುಗಳನ್ನು ಸಂತೆಗಳಲ್ಲಿ ಮಾರಿ ಕೆಲವು ತಿಂಗಳುಗಳಲ್ಲೇ ಬಹಳ ಶ್ರೀಮಂತನಾದ.

ಈ ಪವಾಡದ ಸುದ್ದಿ ರಾಜನ ಕಿವಿಗೂ ಬಿತ್ತು. ರಾಜ ತರುಣನನ್ನು ಕರೆದು 'ಈ ಮಂತ್ರ ಗಾರಿಕೆಯನ್ನು ಎಲ್ಲಿ ಕಲಿತೆ?' ಎಂದು ಕೇಳಿದ.

ಅಹಂಕಾರಿಯಾದ ಆ ತರುಣ ಕೆಳಜಾತಿಯವನೊಬ್ಬನಿಂದ ಇದನ್ನು ಕಲಿತೆನೆಂದು ಹೇಳಲು ಇಷ್ಟ ಪಡದೆ, "ರಾಜನೇ, ಬಹಳ ದೂರದಲ್ಲಿರುವ ವಿಶ್ವವಿದ್ಯಾಲಯದಲ್ಲಿ ಮಹಾ ಪಂಡಿತರುಗಳ ಕಾಲ್ಕೆಳಗೆ ಕುಳಿತು ಕಷ್ಟಪಟ್ಟು ಅಭ್ಯಾಸ ಮಾಡಿದ ಬಳಿಕ ನಾನು ಇದನ್ನು ಕಲಿತೆ" ಎಂದು ಉತ್ತರ ಕೊಟ್ಟ.

"ಸರಿ. ನಮ್ಮ ಮುಂದೆ ಈ ಪವಾಡವನ್ನು ನಡಿಸು" ಎಂದು ರಾಜ ಆಜ್ಞೆ ಕೊಟ್ಟ.

ರಾಜನೂ ಆತನ ಕುಟುಂಬ ಪರಿವಾರದವರೂ, ಮಂತ್ರಿ ಅಧಿಕಾರಿಗಳ ದೊಡ್ಡ ಗುಂಪೂ ಆ ತರುಣನನ್ನು ಹಿಂಬಾಲಿಸಿ ರಾಜನ ತೋಟಕ್ಕೆ ತೆರಳಿದರು. ಆ ತರುಣ ಒಂದು ದೊಡ್ಡ ಮಾವಿನ ಮರವನ್ನು ಆರಿಸಿಕೊಂಡು ಮಂತ್ರೋಚ್ಚಾರ ಮಾಡಿದ. ಆದರೆ ಏನೂ ನಡೆಯಲಿಲ್ಲ. ಏಕೆಂದರೆ ಅವನು ಸುಳ್ಳು ಹೇಳಿದ್ದ.

ತುಂಬ ಅಪಮಾನಗೊಂಡ ಆ ತರುಣ ರಾಜನಿಗೆ ನಿಜವನ್ನು ಹೇಳಿ ತನ್ನ ತಪ್ಪನ್ನು ಒಪ್ಪಿ ಕೊಂಡ. "ಅಹಂಕಾರದಿಂದ ನೀನು ನಿನ್ನ ಗುರುವಿಗೇ ಕೃತಘ್ನನಾದೆ. ಹೋಗಿ ಅವನ ಕ್ಷಮಾಪಣೆ ಕೇಳಿಕೋ. ಮಂತ್ರ ಮತ್ತೆ ಕೆಲಸ ಮಾಡಲೂ ಬಹುದು" ಎಂದು ರಾಜ ಅವನಿಗೆ ಹೇಳಿದ.

ಆ ತರುಣ ರಾಜ ಹೇಳಿದಂತೆಯೇ ಮಾಡಿದ. ಆದರೆ ಆ ಮಂತ್ರಶಕ್ತಿ ಮತ್ತೆ ಕೆಲಸ ಮಾಡಲಿಲ್ಲ. ಏಕೆಂದರೆ ಅವನು ಅದನ್ನು ತನ್ನ ಅತ್ಯಾಶೆಯನ್ನು ತೃಪ್ತಿ ಪಡಿಸಿಕೊಳ್ಳಲು ಉಪಯೋಗಿಸಿದ್ದ.

ಜಾತಕ ಕಥೆಗಳು ಇಂಥ ನೀತಿ ಪಾಠಗಳಿಂದ ತುಂಬಿವೆ.

# ಅರ್ಥಶಾಸ್ತ್ರ

ಒಮ್ಮೆ ಒಬ್ಬ ಉತ್ತಮ ಕುಲಕ್ಕೆ ಸೇರಿದ ತರುಣ ತನ್ನ ದೇಶದ ರಾಜನಿಂದ ಅವಮಾನಕ್ಕೆ ಗುರಿಯಾಗಿ ಅದರ ಸೇಡು ಹೇಗೆ ತೀರಿಸಿಕೊಳ್ಳಲಿ ಎಂದು ಮನಸ್ಸಿನಲ್ಲೇ ಲೆಕ್ಕ ಹಾಕುತ್ತ ಒಂದು ನಿರ್ಜನವಾದ ಬೀದಿಯಲ್ಲಿ ಹೋಗುತ್ತಿದ್ದ. ಆಗ ಅಲ್ಲಿ ಒಬ್ಬ ಕೋಪಿಷ್ಠ ಮುದುಕ ಕೆಲವು ಮುಳ್ಳು ಪೊದೆಗಳ ಬೇರುಗಳಿಗೆ ಏನೋ ರಸವನ್ನು ಸುರಿಸುತ್ತಿರುವುದನ್ನು ಕಂಡ.

"ತಾವು ಏನು ಮಾಡುತ್ತಿದ್ದೀರಿ?" ಎಂದು ತರುಣ ಪ್ರಶ್ನಿಸಿದ.

"ಈ ಪೊದೆಗಳ ಮುಳ್ಳೊಂದು ನನ್ನ ಕಾಲಿಗೆ ಚುಚ್ಚಿದೆ. ಈ ಎಲ್ಲ ಗಿಡಗಳನ್ನೂ ನಾಶ ಮಾಡಬೇಕಾಗಿದೆ. ಕೂಡಲೇ ಇಲ್ಲಿಗೆ ಲಕ್ಷಗಟ್ಟಲೆ ಇರುವೆಗಳು ಬಂದು ಮುತ್ತಿಗೆ ಹಾಕಲಿ ಎಂದು ಈ ಗಿಡಗಳ ಬುಡಕ್ಕೆ ಸಿಹಿ ರಸವನ್ನು ಸುರಿಯುತ್ತಿದ್ದೇನೆ. ಅವು ಗಿಡಗಳ ಬೇರುಗಳನ್ನೆಲ್ಲ ತಿಂದು ಹಾಕುತ್ತವೆ. ಆಗ ಇವೆಲ್ಲ ಸತ್ತುಹೋಗುತ್ತವೆ."

ಆ ಮುದುಕನ ಬುದ್ಧಿಶಕ್ತಿಯನ್ನೂ ದೃಢ ನಿರ್ಧಾರವನ್ನೂ ಕಂಡು ತರುಣನಿಗೆ ಆತ್ಯಾಶ್ಚರ್ಯವಾಯಿತು. ತನ್ನ ಸೇಡು ತೀರಿಸಿಕೊಳ್ಳಲು ಈ ಮುದುಕ ತಕ್ಕ ಸಲಹೆ ಕೊಡಬಲ್ಲನೆಂದು ಅವನಿಗೆ ಅನ್ನಿಸಿತು.

ಚಂದ್ರಗುಪ್ತನೆಂಬ ಹೆಸರಿನ ಆ ತರುಣ ಚಾಣಕ್ಯನೆಂಬ ಆ ಮುದುಕನನ್ನು ತನಗೆ ಸಲಹೆ ಕೊಡುವ ಮಂತ್ರಿಯಾಗಬೇಕೆಂದು ಪ್ರಾರ್ಥಿಸಿದ. ಆ ಮುದುಕನಿಗೂ ರಾಜನ ಬಗ್ಗೆ ತುಂಬ ಮನಸ್ತಾಪ ಇತ್ತು. ಆದ ಕಾರಣ ಆತ ಚಂದ್ರಗುಪ್ತನಿಗೆ ಮಂತ್ರಿಯಾಗಿರಲು ಒಪ್ಪಿಕೊಂಡ.

ಚಾಣಕ್ಯನ ಸಲಹೆಯಂತೆ ನಡೆದದ್ದರಿಂದ ಸ್ವಲ್ಪ ಕಾಲದಲ್ಲೇ ಆಗ ಮಗಧ ದೇಶದ ದೊರೆಯಾಗಿದ್ದ ನಂದನನ್ನು ಓಡಿಸಿ ತಾನೇ ಸಿಂಹಾಸನವನ್ನೇರುವುದು ಚಂದ್ರಗುಪ್ತನಿಗೆ ಸಾಧ್ಯವಾಯಿತು. ಆತ ಮೌರ್ಯ ವಂಶವೆಂದು ಪ್ರಸಿದ್ಧವಾದ ರಾಜ ಮನೆತನವನ್ನು ಸ್ಥಾಪಿಸಿದ.

ಚಂದ್ರಗುಪ್ತ ಚಾಣಕ್ಯರು ಮೊದಲ ಬಾರಿಗೆ ಒಬ್ಬರನ್ನೊಬ್ಬರು ನೋಡಿದ ಕಥೆ ಬಹುಶಃ ಸತ್ಯವಿರಲಾರದು. ಜನಪ್ರಿಯವಾದ ಈ ಕಥೆಯಿಂದ ನಮಗೆ ಆ ಕಾಲದಲ್ಲಿ ಜನಕ್ಕೆ ಚಾಣಕ್ಯನ ಬಗ್ಗೆ ಯಾವ ಭಾವನೆಯಿತ್ತೆನ್ನುವುದು ತಿಳಿಯುತ್ತದೆ. ತನ್ನ ಗುರಿಯನ್ನು ಹೇಗೆ ಸಾಧಿಸಿಕೊಳ್ಳಬೇಕೆಂದು ಚೆನ್ನಾಗಿ ಬಲ್ಲ ಚತುರನೂ ಗರ್ವಿಷ್ಠನೂ ಆದ ಮನುಷ್ಯ ಎಂದು ಜನರ ಕಲ್ಪನೆಯಲ್ಲಿ ಚಾಣಕ್ಯನ ಚಿತ್ರ ಮೂಡಿದೆ.

ಚಾಣಕ್ಯನು ಕೌಟಿಲ್ಯನೆಂದೂ ಪ್ರಸಿದ್ಧನಾಗಿದ್ದಾನೆ. ಈ ಶಬ್ದದ ಅರ್ಥ 'ರಾಜನೀತಿ ಕುಶಲ' ಎಂದು ಅನೇಕ ಜನ ನಂಬುತ್ತಾರೆ. ಆದರೆ ಬಹುಶಃ ಮೂಲದಲ್ಲಿ ಈ ಶಬ್ದ ಕೌಟಿಲ್ಯ ಅಲ್ಲ ಕೌಟಲ್ಯ ಎಂದು ಇದ್ದಿರಬಹುದು. ಕೌಟಲ್ಯ ಎಂಬುದು ಒಬ್ಬ ಪುರಾತನ ಕಾಲದ ಋಷಿಯ ಹೆಸರು. ಚಾಣಕ್ಯನ ಗೋತ್ರದವರು ತಮ್ಮ ಮೂಲ ಪುರುಷ ಆ ಋಷಿಯೆಂದು ತಿಳಿದಿದ್ದಿರಬಹುದು.

ಚಾಣಕ್ಯ ಬುದ್ಧಿವಂತನೂ ದುರಹಂಕಾರಿಯೂ ಎಂಬ ಭಾವನೆ ಅವನು ರಚಿಸಿರುವ ಒಂದು ಗ್ರಂಥದ ಆಧಾರದಿಂದ ರೂಪುಗೊಂಡಿರಬೇಕು. ಆ ಗ್ರಂಥದ ಹೆಸರು **ಅರ್ಥಶಾಸ್ತ್ರ.** ಈ ಗ್ರಂಥ ನಾವು ಈ ವರೆಗೆ ಚರ್ಚಿಸಿರುವ ಗ್ರಂಥಗಳಿಗಿಂತ ತೀರ ಭಿನ್ನವಾದುದು. ನಮ್ಮ ದೇಶದ ವಿದ್ವತ್ತು ಕೇವಲ ಅಧ್ಯಾತ್ಮ, ವೇದಾಂತ, ಕಥೆ, ಕಾವ್ಯ, —ಇಷ್ಟೇ ಅಲ್ಲ, ಅದು ಜೀವನದ ಎಲ್ಲ ಅಂಗಗಳನ್ನೂ ಒಳಗೊಂಡಿದೆ ಎಂಬುದನ್ನು ಈ ಗ್ರಂಥ ತೋರಿಸುತ್ತದೆ. **ಪುರಾಣ**ಗಳನ್ನು ಬರೆದ ಕಾಲದಲ್ಲಿ ರಚಿತವಾದ ಈ 'ಅರ್ಥಶಾಸ್ತ್ರ' ಎಂಬ ಗ್ರಂಥ ರಾಜನೀತಿ, ಸಮಾಜ ವಿಜ್ಞಾನ, ಕಾನೂನು. ಅರ್ಥಶಾಸ್ತ್ರ ಮುಂತಾದ ವಿಷಯಗಳನ್ನು ಒಳಗೊಂಡಿದೆ.

ಈ ವಿಷಯಗಳನ್ನು ಕುರಿತು ಪೂರ್ವ ಕಾಲದ ವಿದ್ವಾಂಸರು ಬರೆದಿಟ್ಟಿದ್ದ ಸೂತ್ರಗಳನ್ನು ಸಿದ್ಧಾಂತಗಳನ್ನೂ ಚಾಣಕ್ಯ ಆಳವಾಗಿ ಅಭ್ಯಾಸ ಮಾಡಿದ್ದ. ರಾಜಕುಮಾರರೂ ಅಧಿಕಾರಿಗಳೂ ಆ ಗ್ರಂಥಗಳನ್ನೋದಿ ಲಾಭ ಪಡೆಯಲು ಬೇಕಾದಷ್ಟು ಕಷ್ಟ ಪಡಲು ಇಷ್ಟಪಡುವುದಿಲ್ಲವೆಂದು ಚಾಣಕ್ಯನಿಗೆ ಗೊತ್ತು. ಆದ ಕಾರಣ ಆತ ತನ್ನ ಗ್ರಂಥದಲ್ಲಿ ವಿದ್ವಾಂಸರು ಅಲ್ಲಿಯ ವರೆಗೆ ಬರೆದಿಟ್ಟಿದ್ದ ಅಥವಾ ಹೇಳಿದ ವಿಚಾರಗಳನ್ನು ಸಂಕ್ಷೇಪವಾಗಿ ಸಂಗ್ರಹಿಸಿ ಕೊಟ್ಟು ಅವುಗಳ ಜೊತೆಯಲ್ಲೇ ತನ್ನ ಅಭಿಪ್ರಾಯಗಳನ್ನೂ ಬರೆದಿಟ್ಟಿದ್ದಾನೆ.

ಶತ್ರುಗಳನ್ನು ಸೋಲಿಸಿ ನಾಶಪಡಿಸಲು ಮೋಸವನ್ನು ಕೂಡಾ ಉಪಯೋಗಿಸಬಹುದೆಂದು ಹೇಳಲು ಚಾಣಕ್ಯ ಹಿಂಜರಿದಿಲ್ಲವಾದ್ದರಿಂದ ಕೆಲವರು ವಿಮರ್ಶಕರು ಅವನನ್ನು ದುಷ್ಟನೆಂದೂ ಕರೆದಿದ್ದಾರೆ. ಆದರೆ ಚಾಣಕ್ಯ ತನ್ನ ಗ್ರಂಥವನ್ನು ಬರೆದದ್ದು ರಾಜರು, ರಾಜನೀತಿಜ್ಞರು,

ರಾಜ್ಯಭಾರ ಮಾಡುವವರು—ಇವರ ಸಲುವಾಗಿ. ಆ ಕಾಲದಲ್ಲಿ ಒಬ್ಬನಲ್ಲಿ ಒಬ್ಬ ರಾಜ ಮೋಸ ವನ್ನು ರಾಜತಂತ್ರವಾಗಿ ಬಳಸುತ್ತಿದ್ದ. ಎಂಥ ಸಂದರ್ಭಗಳಲ್ಲಿ ಅದನ್ನು ಬಳಸಬಹುದು, ಎಂಥ ಸಂದರ್ಭಗಳಲ್ಲಿ ಬಳಸಬಾರದು ಎಂಬುದನ್ನು ಮಾತ್ರ ಚಾಣಕ್ಯ ತೋರಿಸಿಕೊಟ್ಟಿದ್ದಾನೆ.

ರಾಜ್ಯಭಾರ ಕ್ರಮದ ಬಗ್ಗೆ ಇದ್ದ, ಅಷ್ಟು ವಿವೇಕಯುಕ್ತವಲ್ಲದ ಹಲವು ಹಳೆಯ ಸೂತ್ರ ಗಳನ್ನು ಚಾಣಕ್ಯ ಅಲ್ಲಗಳೆದಿದ್ದಾನೆ. ಇದಕ್ಕೀ ಒಂದು ಉದಾಹರಣೆ: ಆ ಕಾಲದಲ್ಲಿ ರಾಜ ಪದವಿಯನ್ನು ಪಡೆಯುವುದಕ್ಕಾಗಿ ರಾಜಕುಮಾರರು ತಮ್ಮ ಅಪ್ಪಂದಿರನ್ನು ಕೊಲ್ಲಲು ಅನೇಕ ಸಲ ಪ್ರಯತ್ನಿಸುತ್ತಿದ್ದರು. ಇದನ್ನು ತಪ್ಪಿಸುವುದಕ್ಕಾಗಿ ಆ ವರೆಗಿನ ಮಂತ್ರಿಗಳು ವಿವಿಧ ಉಪಾಯಗಳನ್ನು ತಮ್ಮ ರಾಜರಿಗೆ ಸೂಚಿಸುತ್ತಿದ್ದರು. ರಾಜಧಾನಿಗೆ ಬಹಳ ದೂರವಿರುವ



ಕೋಟೆಯೊಂದರಲ್ಲಿ ರಾಜಕುಮಾರರನ್ನು ಇಟ್ಟಿರುವುದು ಒಳ್ಳೆಯದು ಎಂದು ಕೆಲವರು ಭಾವಿಸಿದ್ದರು. ರಾಜನ ಬಗ್ಗೆ ಪ್ರಾಣಾಂತಿಕ ಭಯ ಹುಟ್ಟಿರುವ ಹಾಗೆ ರಾಜಕುಮಾರರನ್ನು ಇಟ್ಟಿರಬೇಕು ಎಂದು ಉಳಿದವರು ಸಲಹೆ ಕೊಟ್ಟಿದ್ದರು. ಚಾಣಕ್ಯ ಅವರೆಲ್ಲರ ಅಭಿಪ್ರಾಯಗಳನ್ನೂ ಎತ್ತಿ ಹೇಳಿದ್ದಾನೆ. ಆದರೆ ಆ ಎಲ್ಲ ಉಪಾಯಗಳೂ ಸರಿಯಲ್ಲ ಎಂದು ಕೂಡಾ ಹೇಳಿದ್ದಾನೆ. ಈ ಸಮಸ್ಯೆಗೆ ಅತ್ಯುತ್ತಮ ಪರಿಹಾರಮಾರ್ಗವೆಂದರೆ ರಾಜಕುಮಾರರು ಉತ್ತಮ ಅಧ್ಯಾಪಕರ ಕೈಕೆಳಗೆ ಬೆಳೆಯುವಂತೆ ಮಾಡುವುದೇ ಎಂದು ತನ್ನ ಅಭಿಪ್ರಾಯವನ್ನೂ ಕೊಟ್ಟಿದ್ದಾನೆ.

ಹೀಗೆ '**ಅರ್ಥಶಾಸ್ತ್ರ**' ವ್ಯವಹಾರಯೋಗ್ಯವಾದ ಉಪದೇಶ ಮತ್ತು ಭದ್ರವಾದ ವಿವೇಕ —ಇವುಗಳಿಂದ ಕೂಡಿದ ಪುಸ್ತಕ.



